

ಬಾರಯ್ಯ ವೆಂಕಟರಮಣ ಭಕ್ತರ ನಿಧಿಯೆ
ತೋರಯ್ಯ ನಿನ್ನದಯೆ ತೋಯಜಾಂಬಕನೆ
ವೇದಗೋಚರ ಬಾರೋ ಆದಿ ಕಚ್ಛಪ ಬಾರೊ
ಮೋದಸೂಕರ ಬಾರೋ ಸದಯ ನರಸಿಂಹ ಬಾರೊ
ವಾಮನ ಭಾರ್ಗವ ಬಾರೋ ರಾಮಕೃಷ್ಣನೆ ಬಾರೋ
ಪ್ರೇಮದ ಬುದ್ಧನೆ ಬಾರೋ ಸ್ವಾಮಿ ಕಲ್ಕಿಯೆ ಬಾರೋ
ಅರವಿಂದ ನಾಭನೆ ಬಾರೋ ಸುರರ ಪ್ರಭುವೆ ಬಾರೋ
ಪುರುಹೂತ ವಂದ್ಯ ಬಾರೋ ಪುರಂದರವಿಠಲ ಬಾರೋ

-ಶ್ರೀ ಪುರಂದರದಾಸರು

# ತಿರುಪತಿ ರೈಲುಗಳ ಆಗಮನ ನಿರ್ಗಮನಗಳು

ತಿರುಪತಿಗೆ ಬರುವ ಹಾಗೂ ತಿರುಪತಿಯಿಂದ ಹೊರಡುವ ರೈಲುಗಳ ಬ್ರಾಡ್‌ಗೇಜ್ ಹಾಗೂ ಮೀಟರ್‌ಗೇಜ್ ರೈಲುಗಳ ವಿವರಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ಪಾಠಕ ಯಾತ್ರಿಕರು ಗಮನಿಸಿ ತಮ್ಮ ಪ್ರಯಾಣವನ್ನು ಸುಖಕರ ಮಾಡಿಕೊಳ್ಳದೇಕೆಂದು ಕೋರಲಾಗಿದೆ.

| ರೈಲು ವಿವರ | ತಿರುಪತಿ ಸೇರುವ ವೇಳೆ | ತಿರುಪತಿ ಬಿಡುವ ವೇಳೆ |
|---|---|---|
| | ಬ್ರಾಡ್‌ಗೇಜ್ | |
| ಕಾಕಿನಾಡ (ಪ್ಯಾಸೆಂಜರ್) | ಬೆಳಗ್ಗೆ 3-15 ಗಂಟೆಗೆ | ರಾತ್ರಿ 23-30 ಗಂಟೆಗೆ |
| ಮೈಸೂರು (ಪ್ಯಾಸೆಂಜರ್) | ಬೆಳಗ್ಗೆ 4-00 ಗಂಟೆಗೆ | ರಾತ್ರಿ 22-00 ಗಂಟೆಗೆ |
| ಸಿಕಂದರಾಬಾದ್ (ನಾರಾಯಣಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 6-25 ಗಂಟೆಗೆ | ಸಂಜೆ 18-30 ಗಂಟೆಗೆ |
| ವಿಶಾಖಪಟ್ನಂ (ತಿರುಮಲ ಎಕ್ಸ್‌ಪ್ರೆಸ್) | ಬೆಳಗ್ಗೆ 7-35 ಗಂಟೆಗೆ | ರಾತ್ರಿ 19-00 ಗಂಟೆಗೆ |
| ಹೈದರಾಬಾದು (ರಾಯಲಸೀಮೆ ಎಕ್ಸ್‌ಪ್ರೆಸ್) | ಬೆಳಗ್ಗೆ 9-05 ಗಂಟೆಗೆ | ಸಂಜೆ 15-30 ಗಂಟೆಗೆ |
| ಮದ್ರಾಸು (ಸಪ್ತಗಿರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 10-05 ಗಂಟೆಗೆ |
| ಒಂಗೋಲು (ಪ್ಯಾಸಿಂಜರ್) | ಮಧ್ಯಾಹ್ನ 12-00 ಗಂಟೆಗೆ | ಮಧ್ಯಾಹ್ನ 14-15 ಗಂಟೆಗೆ |
| ಕೊಚ್ಚಿನ್ - ವಾರಣಾಸಿ (ವಾರಣಾಸಿ ಎಕ್ಸ್‌ಪ್ರೆಸ್) (ತಿರುಪತಿಯ ಮೂಲಕ ಮಂಗಳವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಮಂಗಳವಾರ) |
| ವಾರಣಾಸಿ - ಕೊಚ್ಚಿನ್ (ಕೊಚ್ಚಿನ್ ಎಕ್ಸ್‌ಪ್ರೆಸ್) (ತಿರುಪತಿ ಮೂಲಕ ಭಾನುವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಭಾನುವಾರ) |
| ವಾರಣಾಸಿ - ತಿರುಪತಿ (ವಾರಣಾಸಿ ಎಕ್ಸ್‌ಪ್ರೆಸ್) ಮಂಗಳವಾರ - ಭಾನುವಾರಗಳಲ್ಲಿ | ಮಧ್ಯಾಹ್ನ 13-20 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ |
| ಪೂರಿ - ತಿರುಪತಿ (ಪೂರಿ ಎಕ್ಸ್‌ಪ್ರೆಸ್) ಬುಧ - ಶುಕ್ರವಾರಗಳಲ್ಲಿ | ಮಧ್ಯಾಹ್ನ 13-25 ಗಂಟೆಗೆ | ಬೆಳಗ್ಗೆ 9-45 ಗಂಟೆಗೆ |
| ಮದರಾಸು - ತಿರುಪತಿ (ಸಪ್ತಗಿರಿ ಎಕ್ಸ್‌ಪ್ರೆಸ್) | ಮಧ್ಯಾಹ್ನ 16-50 ಗಂಟೆಗೆ | ಸಂಜೆ 17-30 ಗಂಟೆಗೆ |
| ತಿರುಪತಿ - ಕಡಪ (ಇಂಟರ್‌ಸಿಟಿ ಎಕ್ಸ್‌ಪ್ರೆಸ್) | ರಾತ್ರಿ 20-15 ಗಂಟೆಗೆ | ಬೆಳಗ್ಗೆ 6-30 ಗಂಟೆಗೆ |
| ತಿರುಪತಿ - ಗೂಡೂರು (ಗೂಡೂರು ಪ್ಯಾಸೆಂಜರ್) | ರಾತ್ರಿ 20-30 ಗಂಟೆಗೆ | ಬೆಳಗ್ಗೆ 6-25 ಗಂಟೆಗೆ |
| ಹೈದರಾಬಾದು (ಕೃಷ್ಣಾ ಎಕ್ಸ್‌ಪ್ರೆಸ್) | ರಾತ್ರಿ 21-30 ಗಂಟೆಗೆ | ಬೆಳಗ್ಗೆ 5-30 ಗಂಟೆಗೆ |
| ಅರಕೋಣಂ ಅರಕೋಣಂ ಪ್ಯಾಸೆಂಜರ್ | ರಾತ್ರಿ 23-15 ಗಂಟೆಗೆ | ಬೆಳಗ್ಗೆ 4-05 ಗಂಟೆಗೆ |
| | ಮೀಟರ್ ಗೇಜ್ ರೈಲುಗಳು | |
| ಮಧುರೆ (ಮೀನಾಕ್ಷಿ ಎಕ್ಸ್‌ಪ್ರೆಸ್) | ಬೆಳಗ್ಗೆ 4-50 ಗಂಟೆಗೆ | ಮಧ್ಯಾಹ್ನ 15-40 ಗಂಟೆಗೆ |
| ಗುಂತಕಲ್ (ಗುಂತಕಲ್ ಪ್ಯಾಸೆಂಜರ್) | ಬೆಳಗ್ಗೆ 5-15 ಗಂಟೆಗೆ | ಬೆಳಗ್ಗೆ 6-00 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 8-55 ಗಂಟೆಗೆ | ಬೆಳಗ್ಗೆ 10-30 ಗಂಟೆಗೆ |
| ಮಹಬೂಬ್ ನಗರ್ (ವೆಂಕಟಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 14-40 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 11-25 ಗಂಟೆಗೆ | ಸಂಜೆ 17-30 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಮಧ್ಯಾಹ್ನ 14-35 ಗಂಟೆಗೆ | ಬೆಳಗ್ಗೆ 7-00 ಗಂಟೆಗೆ |
| ಗುಂತಕಲ್ (ಗುಂತಕಲ್) | ಸಂಜೆ 18-45 ಗಂಟೆಗೆ | ರಾತ್ರಿ 21-45 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಸಂಜೆ 19-45 ಗಂಟೆಗೆ | ಬೆಳಗ್ಗೆ 2-45 ಗಂಟೆಗೆ |




ಗೌರವ ಸಂಪಾದಕರು :

ಎನ್. ರಮೇಶ್‌ಕುಮಾರ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ.ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲ ತಿರುಪತಿ ದೇವಸ್ಥಾನಗಳು,

ತಿರುಪತಿ.

---

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ

ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ

ದೊರೆಯುವುವು.

---

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**

---

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||

---

**ಸಂಪುಟ -- 27 ಜುಲೈ 1996 ಸಂಚಿಕೆ --2**


# ವಿಷಯಸೂಚಿ



---

ಮುಖ ಚಿತ್ರ : ಆಳವಂದಾರ್ - ಚಿತ್ರ - ಡಾ|| ಕೆ. ಜಗದೀಶ್.

ಹಿಂಬದಿಯಲ್ಲಿ : ಶ್ರೀನಿವಾಸಮಂಗಾಪುರ ದೇವಾಲಯ.

ಒಳಗಡೆ : 1) ತಿರುಚಾನೂರು ಶ್ರೀ ಸುಂದರರಾಜಸ್ವಾಮಿ.

2) ಆನಿವರ ಆಸ್ಥಾನ, ತಿರುಮಲೆಯಲ್ಲಿ.




ವ್ಯಾಪಕವಾಗಿ, ಅಲ್ಲಲ್ಲಿ ಹರಡಿದ್ದ ವೇದಗಳನ್ನು ಒಂದೆಡೆ ಸೇರಿಸಿ ವಿಭಾಗ ಮಾಡಿ ಜಗತ್ತಿಗೆ ನೀಡಿದವರು ದ್ವೈಪಾಯನ ವ್ಯಾಸರು ಎಂಬುದಾದರೆ ತಮಿಳಿನಲ್ಲಿ ಆಗ್ಗೆ ಲುಪ್ತವಾಗಿದ್ದ ಪ್ರಬಂಧಗಳನ್ನು ಪುನಃ ಪ್ರಕಾಶಕ್ಕೆ ತಂದವರು ಶ್ರೀಮನ್ನಾಥ ಮುನಿಗಳು. ಹೀಗಾಗಿ ಜಗತ್ತು ಕಂಡ ಮೊದಮೊದಲಿನ ಸಂಪಾದಕರೆಂದರೆ ವೇದವ್ಯಾಸರು ಹಾಗೂ ನಾಥಮುನಿಗಳೆಂದರೆ ಅತಿಶಯೋಕ್ತಿಯಲ್ಲ. ನಾಥಮುನಿಗಳ ಮೊಮ್ಮಗ ಯಾಮುನಾಚಾರ್ಯರು ಅವರ ಹಾದಿಯಲ್ಲೇ ನಡೆದವರು. ವಿಷ್ಣುಪಾರಮ್ಯವನ್ನು ಒಪ್ಪಿ - ರಂಗನಾಥ ಮೆಚ್ಚುವಂತೆ ಆರಾಧನೆ ನಡೆಸಿದವರು. ಬಾದರಾಯಣರ ಬ್ರಹ್ಮಸೂತ್ರಗಳ, ಭಗವದ್ಗೀತೆಯ, ವೇದಗಳ ತಿರುಳಿನಲ್ಲಿ ವಿಶಿಷ್ಟಾದ್ವೈತವನ್ನು ಕಂಡವರು. ಜೊತೆಗೇ ನಾಥಮುನಿಗಳಿಂದ ಆಳ್ವಾರರ ಸಾಹಿತ್ಯರಾಶಿಯೂ ಅವರಿಗೆ ದತ್ತವಾಯಿತೆಂದ ಮೇಲೆ ಹೇಳುವುದೇನಿದೆ. ಅಂದಿದ್ದ ಎಲ್ಲರೀತಿಯ ತತ್ತ್ವವಾದಗಳ ಪರಿಚಯ ಪಡೆದಿದ್ದ ಅವರು ಪ್ರಸ್ಥಾನ ತ್ರಯದಲ್ಲಿ ಶ್ರೀ ವೈಷ್ಣವತೆಯನ್ನು ಗುರುತಿಸಿದ್ದೇ ಅಲ್ಲದೆ ತಮ್ಮ ಕೃತಿಗಳಿಂದ - (ಇವು ಎಂಟು ಏಳು ದೊರೆತಿವೆ, ಒಂದು ದೊರೆತಿಲ್ಲ. ದೊರೆತಿರುವವುಗಳಲ್ಲಿ ಹಲವು ಪೂರ್ಣ, ಹಲವು ತ್ರುಟಿತ) ವಿಶಿಷ್ಟಾದ್ವೈತದ ಮೂಲ ಸೆಲೆಯನ್ನು ಸಂಪಾದಿಸಿಕೊಟ್ಟರು. ಇದರಿಂದಾಗಿ ಅವರ ಪರೋಕ್ಷ ಶಿಷ್ಯ ಭಗವದ್ರಾಮಾನುಜರು ವಿಶಿಷ್ಟಾದ್ವೈತವನ್ನು ಭಾರತೀಯ ತತ್ತ್ವಶಾಸ್ತ್ರೇತಿಹಾಸದಲ್ಲಿ ಭದ್ರವಾಗಿ ಪ್ರತಿಷ್ಠಾಪಿಸಿ ಪ್ರಚಾರಗೊಳಿಸಲು ಅನುಕೂಲವಾಯಿತು.

ಯಾಮುನರ ಧರ್ಮಯಜ್ಞ ಆರಾಧನೆ ಇಷ್ಟಕ್ಕೇ ನಿಲ್ಲಲಿಲ್ಲ. ಅವರು ಶ್ರೀರಂಗನಾಥನ ಪೂಜೆಯಲ್ಲಿಯೂ ತಮ್ಮನ್ನು ತಾವು ತೊಡಗಿಸಿಕೊಂಡರು. ಶಿಷ್ಯರನ್ನು ಆಯ್ದು ತಮ್ಮ ವಿದ್ಯೆಯನ್ನು ಧಾರೆಯೆರೆದರು. ಶ್ರೀ ವೈಷ್ಣವ ಸಿದ್ಧಾಂತವನ್ನು ಜಗದ್ವ್ಯಾಪಿಯನ್ನಾಗಿಸಲು ಯಾದವ ಪ್ರಕಾಶರಲ್ಲಿ ಕಲಿಯುತ್ತಿದ್ದ ರಾಮಾನುಜರೇ ತಕ್ಕವರೆಂದು ಬಹುಮೊದಲೇ ನಿರ್ಧರಿಸಿ, ಅವರಿಗೆ ಕಡೆಗಾಲದಲ್ಲಿ ಕರೆ ಕಳುಹಿಸಿ ತಾವು ಕಣ್ಣು ಮುಚ್ಚಿದರು. ರಾಮಾನುಜರು ತಮ್ಮ ಈ ದೂರದ ಗುರುವಿನ ಅಪೇಕ್ಷೆಗಳನ್ನು ಪೂರೈಸಿ ಧನ್ಯರಾದರೆಂಬುದು ಬೇರೆ ವಿಷಯ. ಇಲ್ಲಿ ಯಾಮುನರ ದೂರದೃಷ್ಟಿ ಚಕಿತಗೊಳಿಸುವಂತಹದ್ದು, ಯೋಚಿಸಿದರೆ ಭಕ್ತಿಮೂಕಗೊಳಿಸುವಂತಹದ್ದು ಎಂಬುದು ಮುಖ್ಯ.

ಕ್ರಿ.ಶ. 916 ರಲ್ಲಿ ವೀರನಾರಾಯಣಪುರದಲ್ಲಿ ಹುಟ್ಟಿದ ಯಾಮುನರಿಗೆ ಇಂದಿಗೆ ಹದಿನೆಂಟು ವರ್ಷಚಕ್ರಗಳಾಗಿವೆ. ಅವರ ಕಾಂತಾ ಸ್ತೋತ್ರ, ಸ್ತೋತ್ರರತ್ನಗಳು ಇಂದಿಗೂ ಉಪಾದೇಯವಾಗಿ ಓದುಗರನ್ನು ದಿನದಿನದ ಜಂಜಡದಿಂದ ಮುಕ್ತವಾಗಿಸಿ ಬೇರೊಂದು ಈಶ್ವರ ಲೋಕಕ್ಕೆ ಒಯ್ಯುತ್ತವೆ. ವಿಶಿಷ್ಟಾದ್ವೈತವೆಂಬ ತತ್ತ್ವಕ್ಕೆ ಹೊಂದಿಕೊಳ್ಳುವಂತಿದ್ದರೂ, ಸಾಮಾನ್ಯವಾಗಿ ಭಕ್ತಿಯನ್ನು ಪ್ರಪತ್ತಿಯನ್ನು ಬೋಧಿಸುತ್ತ ಸರ್ವಜನ ಗ್ರಾಹ್ಯವಾಗುವಂತಿವೆ. ಅವುಗಳ ಮನನ, ಧ್ಯಾನಗಳಿಂದ ಯಾರೇ ಆದರೂ ಮನಃಶಾಂತಿಯನ್ನು, ಚಿತ್ತ ಸಮಾಧಾನವನ್ನು, ಬುದ್ಧಿ ಸಮತೆಯನ್ನು ಪಡೆಯಬಹುದಾಗಿದೆ.

ಹೀಗಾಗಿಯೇ ಯಾಮುನಾಚಾರ್ಯರು ಆಗಿಹೋದ 1080 ವರ್ಷಗಳ ನಂತರ ಇಂದಿಗೂ ಸಂಗತವಾಗಿ, ಸಮಯೋಚಿತ ಆಗಿದ್ದಾರೆ. ತತ್ಕ್ಷಣದ ತಾಕಲಾಟಗಳ ತಿರುಗಾಲುತನದ ನಡುವೆ, ಅವರ ಪ್ರಪತ್ತಿ ಸಂದೇಶ ಹರಡುವಂತಾದರೆ ಸ್ವಲ್ಪ ತಂಪು ವಾತಾವರಣವುಂಟಾಗಿ, ಮನ ಮುದಗೊಂಡು, ಅಭ್ಯುದಯದ ಹಾದಿಯಲ್ಲಿನ ಮನುಷ್ಯ ಜೀವನ ಯಾತ್ರೆ ಸುಖಕರವಾದೀತು.

* * *

# ಯಾಮುನಾಚಾರ್ಯ

---ಎಚ್. ಜೆ. ರಾಮೈಂಗಾರ್.

ಆಷಾಢೇಚೋತ್ತರಾಷಾಢಾ
ಸಂಭೂತಂ ತತ್ರವೈಪುರೇ
ಸಿಂಹಾಸನಾಂಶಂ ವಿಖ್ಯಾತಂ
ಶ್ರೀಯಾಮುನ ಮುನಿಂ ಭಜೇ

ಸಿಂಹಾಸನಾಂಶಭವ
ಈಶ್ವರ ಯೋನಿ ಸಿಂಧು
ಮುಕ್ತಾಮಣಿಂ ಮಹಿತನಾಥ
ಮುನೀಂದ್ರಪೌತ್ರಂ
ಪ್ರಜ್ಞಾ ವಿಶೇಷ ಜಲಧಿಂ
ಪ್ರತಿವಾದ ತೂಲ
ಜಂಘಾನಿಲಂ ಹೃದಯ
ಚಿಂತಯ ಯಾಮುನಾರ್ಯಂ

ಶ್ರೀ ರಾಮಮಿಶ್ರ ಸಚ್ಛಿಷ್ಯಂ
ವಂದೇ ತತ್ತ್ವಾರ್ಥಕೋವಿದಂ
ವಾದಾದವಾಪ್ತ ರಾಜ್ಯಾರ್ಧೋ
ವಿರಕ್ತೋ ಯಾಮುನೋಽಭವತ್

ಯತ್ಪದಾಂಭೋರುಹಧ್ಯಾನ
ವಿಧ್ವಸ್ತಾಶೇಷಕಲ್ಮಷಃ
ವಸ್ತುತಾಮುಪಯಾತೋಽಹಂ
ಯಾಮುನೇಯಂ ನಮಾಮಿ ತಂ

ವಿಗಾಹೇ ಯಾಮುನಂ ತೀರ್ಥಂ
ಸಾಧು ಬೃಂದಾವನೇ ಸ್ಥಿತಂ
ನಿರಸ್ತಜಿಹ್ಮಗ ಸ್ಪರ್ಶೇ
ಯತ್ರ ಕೃಷ್ಣಃ ಕೃತಾದರಃ

ಯಾಮುನಾರ್ಯ ಸುಧಾಂಭೋದಿಂ
ಅವಗಾಹ್ಯ ಯಥಾಮತಿ
ಆದಾಯ ಭಕ್ತಿಯೋಗಾಖ್ಯಂ
ರತ್ನಂ ಸಂದರ್ಶಯಾಮ್ಯಹಂ

ವಿದಾಯ ವೈದಿಕಂ ಮಾರ್ಗಂ
ಯತ್ಕೌತುಸ್ತುತ ಕಂಟಕಂ
ನೇತಾರಂ ಭಗವದ್ಭಕ್ತೇಃ
ಯಾಮುನಂ ಅನವಾಮಹೇ

ಪರಂಬ್ರಹ್ಮೈವಾಜ್ಞಂ ಭ್ರಮ
ಪರಿಗತಂ ಸಂಸರಿತಿತತ್
ಪರೋಪಾಧ್ಯಾಲೀಢಂ
ವಿವಶಮಶುಭಸ್ಯಾಸ್ಪದಮಿತಿ
ಶ್ರುತಿ ನ್ಯಾಯಾಪೇತಂ ಜಗತಿ
ವಿತತಂ ಮೋಹನಮಿದಂ
ತಮೋಯೇನಾಪಾಸ್ತಂ ಸಹಿ
ವಿಜಯತೇ ಯಾಮುನ ಮುನಿಃ

ನಾಥಮುನಿಗಳ ಮಗ ಈಶ್ವರ ಮುನಿಯು, ತಮ್ಮ ತಂದೆ, ತಾಯಿ ಮತ್ತು ಧರ್ಮಪತ್ನಿಯೊಡನೆ ಶ್ರೀಕೃಷ್ಣನ ಜನ್ಮಸ್ಥಾನವಾದ ಬೃಂದಾವನ, ಮಥುರೆ, ಗೋಕುಲಗಳಿಗೆ ಯಾತ್ರೆ ಹೋದಾಗ, ಶ್ರೀಕೃಷ್ಣನ ವರಪ್ರಸಾದದಿಂದ ಹುಟ್ಟಿದ ಮಗನಿಗೆ ಯಾಮುನ ಎಂದು ಹೆಸರಿಟ್ಟರು. ವೀರನಾರಾಯಣಪುರದಲ್ಲಿದ್ದ ಯಾಮುನರು ಬಹಳ ಬುದ್ಧಿವಂತ, ಶ್ರೇಷ್ಠಜ್ಞಾನಿ, ಉತ್ತಮ ಭಕ್ತ ಎನಿಸಿದ್ದರು. ಇವರಲ್ಲಿ ಅಸಾಧಾರಣ ಜ್ಞಾಪಕ ಶಕ್ತಿ ಇದ್ದಿತು. ವಿದ್ಯಾಭ್ಯಾಸ ಮಾಡುತ್ತಿದ್ದಾಗಲೇ ಶಾಲೆಯಲ್ಲಿ ಹಿರಿಯಮಣಿಯ ಸ್ಥಾನವನ್ನು ಗೆದ್ದುಕೊಂಡಿದ್ದರು.

ಇವರಿಗೆ ಹನ್ನೆರಡು ವರ್ಷವಾಗಿದ್ದಾಗ, ಚೋಳ ರಾಜನ ಆಸ್ಥಾನದ ಮಹಾವಿದ್ವಾಂಸನಾದ ಅಕ್ಕಿ ಆಳ್ವಾನ್ ಎಂಬುವನ ಶಿಷ್ಯರು, ಇವರ ಗುರುಗಳಾದ ಮಹಾಭಾಷ್ಯಭಟ್ಟರಿಂದ ಅವರ ಸಂಪಾದನೆಯ ಭಾಗವಾದ ವಾರ್ಷಿಕ ಕಪ್ಪವನ್ನು ವಸೂಲು ಮಾಡಲು ಬಂದರು. ಆಗ ಗುರುಗಳು ಅಲ್ಲಿ ಇಲ್ಲದುದರಿಂದ ಯಾಮುನರು ಕಪ್ಪ ಕೊಡುವುದಿಲ್ಲವೆಂದು





ತಿರುಮಲೆ - ತಿರುಪತಿ ದೇವಸ್ಥಾನಗಳು

## ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ
--ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ
--ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ
--ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ
--ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ
--ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಯಾತ್ರಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಂಡು ದೇವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

ತಿ. ತಿ. ದೇವಸ್ಥಾನಗಳು,
--ತಿರುಪತಿ.



ಹೇಳಿ ಕಳುಹಿಸಿ ಅಕ್ಕಿ ಆಳ್ವಾನ್‌ಗೆ ಈ ಪದ್ಯವನ್ನು ಬರೆದು ಕಳುಹಿಸಿದರು.

ನ ವಯಂ ಕವಯಸ್ತು ಕೇವಲಂ
ನವಯಂ ಕೇವಲ ತಂತ್ರಪಾರಗಾಃ
ಅಪಿತು ಪ್ರತಿವಾದಿವಾರಣ
ಪ್ರಕಟಾಟೋಪ ವಿಪಾಟನಕ್ಷಮಾಃ

ರಾಜನಿಂದ ಆಸ್ಥಾನಕ್ಕೆ ಬರಲು ಕರೆಬಂದಾಗ ಮೊದಲು ರಾಜಾಜ್ಞೆಯನ್ನು ತಿರಸ್ಕರಿಸಿದರೂ, ಆಮೇಲೆ ಪಲ್ಲಕ್ಕಿಯನ್ನು ಕಳುಹಿಸಿ ಗೌರವ ಪೂರ್ವಕ ಆಹ್ವಾನ ರಾಜನಿಂದ ಬಂದಾಗ, ಅದನ್ನು ಅಂಗೀಕರಿಸಿ, ರಾಜ ರಾಣಿಯರ ಸಮ್ಮುಖದಲ್ಲಿಯೇ ತಮ್ಮ ಪಾಂಡಿತ್ಯ ಪ್ರಕಾಶನ ಮತ್ತು ವಾದ ಶಕ್ತಿಗಳಿಂದ, ಅಕ್ಕಿ ಆಳ್ವಾನನ್ನು ಶಾಸ್ತ್ರಾರ್ಥದಲ್ಲಿ ಸೋಲಿಸಿ, ತಮ್ಮ ಗುರುಗಳಿಂದ ಕಪ್ಪವನ್ನು ತೆಗೆದುಕೊಳ್ಳದಂತೆ ಮಾಡಿದರು. ಮೊದಲೇ ಆಗಿದ್ದ ಒಪ್ಪಂದದಂತೆ ಯಾಮುನರು ಹೇಳಿದ "ರಾಜಾಸಾರ್ವಭೌಮಃ, ರಾಜ ಪತ್ನೀ ಪತಿವ್ರತಾ, ತ್ವಂ ಮಾತಾ ಅವಂಧ್ಯಾ" ಎಂಬುದನ್ನು ಅಲ್ಲವೆಂದು ಸಮರ್ಥಿಸಲಾರದೆ, ಅಕ್ಕಿ ಆಳ್ವಾನನು ತನ್ನ ಸೋಲನ್ನು ಒಪ್ಪಿಕೊಂಡನು. ಆಮೇಲೆ ಯಾಮುನರೇ ಇದಕ್ಕೆ ಉತ್ತರವನ್ನು ನೀಡಿದರು.

ಸಂಸ್ಕೃತ ವಿದ್ವತ್ತು, ಸಾಹಿತ್ಯ ಕವಿತ್ವಗಳಿಲ್ಲಿಯೂ ಯಾಮುನರಂಥವರು ಸಿಗುವುದು ದುರ್ಲಭ. ಅವರು ನಾಯಕರಾಗಲೋಸುಗವೇ ಹುಟ್ಟಿದವರು. ರಾಣಿಯಿಂದ ಆಳವಂದಾರ್ ಎಂಬ ಬಿರುದನ್ನೂ, ರಾಜನಿಂದ ಅರ್ಧರಾಜ್ಯವನ್ನೂ ಪಡೆದು ಆಡಳಿತ ನಡೆಸುತ್ತ ಕೆಲಕಾಲ ಭೋಗಜೀವನವನ್ನು ನಡೆಸಿದರು. ನಾಥಮುನಿಗಳ ಹಾಗೂ ಪುಂಡರೀಕಾಕ್ಷರ ಇಚ್ಛೆಯಂತೆ, ರಾಮಮಿಶ್ರರು ಸತತ ಪ್ರಯತ್ನ ಮಾಡಿ, ಪ್ರಭಾವ ಬೀರಿದಾಗ, ಯಾಮುನರು ಎಲ್ಲವನ್ನೂ ದಾನಮಾಡಿ, ತಮ್ಮ ಎಂಭತ್ತನೆಯ ವಯಸ್ಸಿನಲ್ಲಿ ಶ್ರೀರಂಗಕ್ಕೆ ಬಂದು ಸಂನ್ಯಾಸಿಯಾಗಿ, ಆಧ್ಯಾತ್ಮಿಕ ಜೀವನವನ್ನು ಅಪ್ಪಿದರು. ಗುರುಗಳ ಆಜ್ಞೆಯಂತೆ ಶ್ರೀರಂಗದ ಶ್ರೀ ವೈಷ್ಣವ ಆಚಾರ್ಯ ಪೀಠದ ಮುಖ್ಯಸ್ಥರಾಗಿ, ಶ್ರೀರಂಗನಾಥ ದೇವಾಲಯದ ಅಧಿಪತಿಯಾಗಿ ಜ್ಞಾನ ಭಕ್ತಿ ವೈರಾಗ್ಯ ಶಿರೋಮಣಿಯಾಗಿ ಕಾಲಕ್ಷೇಪ, ಗೋಷ್ಠಿಗಳನ್ನು ನಡೆಸಿದರು.

ವಿಶಿಷ್ಟಾದ್ವೈತದ ವಿರುದ್ಧ ನಿಂತಿದ್ದ ಜನಪ್ರಿಯವಾದ ಅದ್ವೈತ, ಪೂರ್ವ ಮೀಮಾಂಸೆ, ಬೌದ್ಧ, ಚಾರ್ವಾಕ ಮುಂತಾದ ವೈದಿಕ - ಅವೈದಿಕ ಮತಗಳೊಡನೆ ಹೋರಾಡಿ ಗೆದ್ದರು. ಗ್ರಂಥ ನಿರ್ಮಾಣದಲ್ಲಿ ತೊಡಗಿ ಚತುಃಶ್ಲೋಕೀ, ಸ್ತೋತ್ರರತ್ನ, ಆಗಮ ಪ್ರಾಮಾಣ್ಯ, ಸಿದ್ಧಿತ್ರಯ, ಮಹಾಪುರುಷನಿರ್ಣಯ, ಗೀತಾರ್ಥ ಸಂಗ್ರಹ ಎಂಬ ಶ್ರೇಷ್ಠ ಕೃತಿಗಳ ಶ್ರೀ ವೈಷ್ಣವ ಧರ್ಮಸಾಹಿತ್ಯವನ್ನು ರಚಿಸಿ, ಆ ಮೂಲಕ ಖಿಲವಾಗಿದ್ದ ವಿಶಿಷ್ಟಾದ್ವೈತ ತತ್ತ್ವದ ಮೂಲ ರೇಖೆಗಳನ್ನೆಲ್ಲ ಸ್ಪಷ್ಟವಾಗಿ ಸ್ಥಿರೀಕರಿಸಿ, ಶ್ರೀ ವೈಷ್ಣವ ಸಂಪ್ರದಾಯಗಳಿಗೆ ನವಚೇತನವನ್ನು ನೀಡಿ, ಉಭಯ ವೇದಾಂತವನ್ನು ಅತಿ ಉತ್ಸಾಹದಿಂದ ಪ್ರಚಾರಮಾಡಿದರು.

"ಚತುಃಶ್ಲೋಕೀ" ಎಂಬ ಸುಂದರವಾದ ಸ್ತೋತ್ರದಲ್ಲಿ ಮಹಾಲಕ್ಷ್ಮಿಯನ್ನು ಸ್ತುತಿಸಿ, ಮೋಕ್ಷ ಪ್ರದಾನಕಾರ್ಯದಲ್ಲಿ ಅವಳ ಪಾತ್ರವನ್ನು ವಿಶದೀಕರಿಸಿದ್ದಾರೆ : "ಸ್ತೋತ್ರರತ್ನ"ದಲ್ಲಿ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿದ್ದಾರೆ ; ಈ ಎರಡು ಕೃತಿಗಳ ಮೂಲಕ ಪ್ರಪತ್ತಿ ಅಥವಾ ಶರಣಾಗತಿ ತತ್ತ್ವದ ಅನುಷ್ಠಾನವನ್ನು ತೋರಿಸಿಕೊಟ್ಟಿದ್ದಾರೆ. ನಾರಾಯಣನಿಂದಲೇ ಉಪದೇಶಿಸಲ್ಪಟ್ಟ ಪಾಂಚರಾತ್ರ ಆಗಮವು ವೇದದಷ್ಟೇ ಪ್ರಾಮುಖ್ಯ ಹೊಂದಿದೆ ಎಂಬುದನ್ನು "ಆಗಮ ಪ್ರಾಮಾಣ್ಯ"ದಲ್ಲಿ ವಿವರಿಸಿ ಹೇಳಿದ್ದಾರೆ; ಜೀವಾತ್ಮ - ಪರಮಾತ್ಮಸ್ವರೂಪ, ಆತ್ಮ - ಇಂದ್ರಿಯ ಗ್ರಾಹ್ಯ ವಿಷಯಗಳ ಸಂಬಂಧ, ಜೀವನು ಬ್ರಹ್ಮಕ್ಕಿಂತ ಬೇರೆ ಎಂಬುದನ್ನು "ಸಿದ್ಧಿತ್ರಯ"ದಲ್ಲಿ ಸಾಧಿಸಿದ್ದಾರೆ; ಉಪನಿಷತ್ತು ಹಾಗೂ ಪುರಾಣಗಳಲ್ಲಿ ಹೇಳಿರುವ ದೇವರು ನಾರಾಯಣನೇ ಎಂದು "ಮಹಾಪುರುಷ ನಿರ್ಣಯ"ದಲ್ಲಿ ತೋರಿಸಿದ್ದಾರೆ. ಕರ್ಮ, ಜ್ಞಾನ, ಭಕ್ತಿಗಳಿಂದ ಹೊಂದಲ್ಪಡತಕ್ಕ ನಾರಾಯಣನೇ ಪರಬ್ರಹ್ಮ ಎಂಬುದೇ ಗೀತಾಶಾಸ್ತ್ರದ ಸಂಕ್ಷೇಪಾರ್ಥವೆಂದು "ಗೀತಾರ್ಥಸಂಗ್ರಹ"ದಲ್ಲಿ ತಿಳಿಸಿದ್ದಾರೆ. ಯಾಮುನರ ಈ ಕೃತಿಗಳಲ್ಲಿ ಕಂಡುಬರುವ ಶರೀರಿ-ಶರೀರ ಅಥವಾ ಶೇಷಿ-ಶೇಷ ಭಾವವು ರಾಮಾನುಜರಿಂದ ಹೆಚ್ಚು ಶಕ್ತಿ ಪಡೆದು ಹರಡಿತು. ಉಪನಿಷತ್ತು ಮತ್ತು ದಿವ್ಯಪ್ರಬಂಧಗಳಲ್ಲಿರುವ ತತ್ತ್ವ ಒಂದೇ ಎಂಬ ಯಾಮುನರ ಭಾವನೆಯನ್ನು ರಾಮಾನುಜರು ತಮ್ಮ ಶ್ರೀಭಾಷ್ಯದಲ್ಲಿ ಸಮರ್ಥಿಸಿದ್ದಾರೆ.

ತಾತ ನಾಥಮುನಿಗಳು ಹಾಕಿದ್ದ ಭದ್ರವಾದ ತಳಹದಿಯ ಮೇಲೆ ಮೊಮ್ಮಗ ಯಾಮುನರು ಭವ್ಯವಾದ ಮಂದಿರವೊಂದನ್ನು ನಿರ್ಮಿಸಿದರು. ದಾರ್ಶನಿಕ ಕ್ರಮ ಹಾಗೂ ಕವಿತಾಶಕ್ತಿಗಳ ಮಿಲನ ಆಗಬೇಕೆಂದು ತೋರಿಸಿದ ಯಾಮುನರ ಮಾರ್ಗವು ವೇದಾಂತ ದೇಶಿಕರಿಗೆ ಸ್ಫೂರ್ತಿ ನೀಡಿ ಮಾರ್ಗದರ್ಶನ ಮಾಡಿತು. ನಾಥಮುನಿಗಳ ಕೃತಿಗಳ ಪೂರ್ಣಪಾಠ ಸಿಗದಿರುವುದರಿಂದ, ಯಾಮುನರೇ ವಿಶಿಷ್ಟಾದ್ವೈತ ತತ್ತ್ವ ಮತ್ತು ಶ್ರೀ ವೈಷ್ಣವ ಮತಗಳನ್ನು ಪ್ರಚಾರ ಮಾಡಿದ ಪ್ರಾಚೀನ ಶ್ರೀ ವೈಷ್ಣವ ಆಚಾರ್ಯರೆನ್ನಬಹುದು. ಯಾಮುನರ ಶ್ರೀತತ್ತ್ವವು ವೈಷ್ಣವ ಮತವನ್ನು ಶ್ರೀ ವೈಷ್ಣವ ಮತವನ್ನಾಗಿಸಿ, ಅದಕ್ಕೆ ಹೊ

ಕಳೆಯನ್ನು ನೀಡಿ, ಅದು ವಿಶ್ವಕಲ್ಯಾಣಮಾರ್ಗ ಆಗುವಂತೆ ಮಾಡಿತು.

ಯಾಮುನರ ನೇತೃತ್ವದಲ್ಲಿ ಶ್ರೀರಂಗದ ರಂಗನಾಥ ದೇವಾಲಯದಲ್ಲಿ ನಡೆಯುತ್ತಿದ್ದ ಪೂಜೆ, ಸೇವೆ, ಉಪದೇಶ, ಪ್ರವಚನ, ಚರ್ಚೆ, ಇವುಗಳಿಂದ ಶ್ರೀರಂಗವು ಶ್ರೀವೈಷ್ಣವ ಮತದ ಪ್ರಬಲ ಕೇಂದ್ರವಾಯಿತು. ಇದರ ಜೊತೆಗೆ ಕಂಚಿ, ತಿರುಪತಿಗಳೂ ಮುಖ್ಯ ಕೇಂದ್ರಗಳಾದುವು. ಈ ಸ್ಥಳಗಳಲ್ಲಿ ಬ್ರಹ್ಮಸೂತ್ರಗಳು, ಉಪನಿಷತ್ತುಗಳು, ಭಗವದ್ಗೀತೆ ಎಂಬ ಪ್ರಸ್ಥಾನತ್ರಯವನ್ನೊಳಗೊಂಡ ಸಂಸ್ಕೃತಾಭ್ಯಾಸಕ್ಕೆ ಅವಕಾಶ - ಅನುಕೂಲಗಳು ದೊರೆತು, ಅವುಗಳಿಗೆ ಬಾಯಿಮೂಲಕ ಭಾಷ್ಯ ರಚನೆಗಳು ಆರಂಭವಾದುವು. ನಮ್ಮಾಳ್ವಾರರ ತಿರುವಾಯ್ಮೊಳಿಯ ವಿಮರ್ಶಾತ್ಮಕ ಅಧ್ಯಯನಕ್ಕೂ ಉತ್ತೇಜನ ಸಿಕ್ಕಿತು. ವೇದ - ಪ್ರಬಂಧಗಳ ಅಧ್ಯಯನವೇ ಮುಂದೆ ವಡಗಲೆ, ತೆಂಗಲೆ ಎಂದೆರಡು ಸಂಪ್ರದಾಯಗಳ ಹುಟ್ಟಿಗೆ ಕಾರಣವಾಗಿ ಶ್ರೀವೈಷ್ಣವ ಮತವು ಎರಡಾಗಿ ಒಡೆಯ ಹೋಯಿತು.

ತಮ್ಮ ಕಾಲದ ನಂತರ ತಮ್ಮ ಸ್ಥಳವನ್ನು ಭರ್ತಿ ಮಾಡಲು ತಮ್ಮ ಕಿರಿಯ ಸಮಕಾಲೀನರೂ, ಜ್ಞಾನಶೀಲಗಳ ಗಣಿಯೂ ಆದ ರಾಮಾನುಜರೇ ತಕ್ಕವರೆಂದು ತಿಳಿದಿದ್ದರೂ, ಅವರು ಅದ್ವೈತದ ಆಚಾರ್ಯರಾದ ಯಾದವ ಪ್ರಕಾಶರಲ್ಲಿ ಶಾಸ್ತ್ರಾಭ್ಯಾಸ ಮಾಡುತ್ತಿದ್ದುದರಿಂದ, ಯಾಮುನ - ರಾಮಾನುಜರ ಭೇಟಿ ಯಾಮುನರ ಜೀವಿತದ ಕಾಲದಲ್ಲಿ ಆಗಲೇ ಇಲ್ಲ. ಆದರೂ ಒಮ್ಮೆ ಕಂಚಿಗೆ ಹೋಗಿ ರಾಮಾನುಜರನ್ನು ಕಟಾಕ್ಷಿಸಿದಾಗ, ತಮ್ಮ ಮನಸ್ಸಿನಲ್ಲಿ ಅವ್ಯಕ್ತವಾಗಿ ಅಡಗಿದ್ದು ಹೊರಬರಲು ತವಿಸುತ್ತಿದ್ದ, ಆದರೆ ಮಾತುಗಳಲ್ಲಿ ಸರಿಯಾಗಿ ಮೂಡದಿದ್ದ, ಭಾವನೆಗಳೆಲ್ಲಾ ಸ್ಪಷ್ಟವಾದ ರೂಪವನ್ನು ಪಡೆದು ರಾಮಾನುಜರಲ್ಲಿ ಪ್ರಕಾಶಿಸುತ್ತಿವೆ; ಭಕ್ತಿ-ಪ್ರಪತ್ತಿ ಸಿದ್ಧಾಂತವನ್ನು ನಿರೂಪಿಸುವ ಶಕ್ತಿ ರಾಮಾನುಜರಲ್ಲಿ ಅಡಗಿದೆ - ಎಂಬುದು ಯಾಮುನರಿಗೆ ಗೋಚರಿಸಿತು. ಆಗ ಯಾಮುನರು ರಾಮಾನುಜರಿಗೆ ಇಳೆಯ ಪೆರುಮಾಳ್ ಎಂದು ಹೆಸರುಕೊಟ್ಟರು. ಶ್ರೀವೈಷ್ಣವ ಸಿದ್ಧಾಂತ ದರ್ಶನದ ನಿರ್ವಹಣೆಗೆ ಸಮರ್ಥರೆಂದು ತೋರಿದ ರಾಮಾನುಜರನ್ನು ತಮ್ಮ ಪಂಥಕ್ಕೆ ದೊರಕಿಸಿಕೊಡುವಂತೆ ಯಾಮುನರು ಕಂಚಿಯ ವರದರಾಜಸ್ವಾಮಿಯನ್ನು ಈ ಶ್ಲೋಕಗಳಿಂದ ಶರಣು ಹೋಗಿ ಪ್ರಾರ್ಥಿಸಿ ಶ್ರೀರಂಗಕ್ಕೆ ಹಿಂದಿರುಗಿದರು.

ಯಸ್ಯ ಪ್ರಸಾದಕಲಯಾ
ಬಧಿರಃ ಶೃಣೋತಿ
ಪಂಗುಃ ಪ್ರಧಾವತಿ
ಜವೇನ ಚ ಶಕ್ತಿಮೂಕಃ!
ಅಂಧಃ ಪ್ರಪಶ್ಯತಿ
ಸುತಂ ಲಭತೇ ಚ ವಂಧ್ಯಾ
ತಂ ದೇವದೇವ ವರದಂ
ಶರಣಂ ಗತೋಸ್ಮಿ

ಲಕ್ಷ್ಮೀಶ ಪುಂಡರೀಕಾಕ್ಷ
ಕೃಪಾ ರಾಮಾನುಜೇ ತವ
ವಿಧಾಯ ಸ್ವಮತೇ ನಾಥ
ಪ್ರವಿಷ್ಟಂ ಕರ್ತುಮರ್ಹಸಿ

ರಾಮಾನುಜರು ಯಾದವ ಪ್ರಕಾಶರನ್ನು ತ್ಯಜಿಸಿದರೆಂಬ ಸುದ್ದಿ ತಿಳಿದಾಗ, ಇದನ್ನೇ ಆಶಿಸುತ್ತಿದ್ದ ಯಾಮುನರಿಗೆ ಉಂಟಾದ ಸಂತೋಷದಲ್ಲಿ, ಅವರು ಶ್ರೀರಂಗದ ರಂಗನಾಥಸ್ವಾಮಿಯನ್ನು ಕುರಿತು ಹಾಡಿದ ಗೀತೆಗಳೇ ಸ್ತೋತ್ರರತ್ನವೆನಿಸಿ, ಶ್ರೀ ವೈಷ್ಣವ ಮತದ ಮೂಲ ತತ್ವದ ಪ್ರಕಾಶಿಕೆ ಎನಿಸಿಕೊಂಡಿತು. ಇಷ್ಟಾದರೂ ತಮ್ಮ ಹಿರಿಯಾಸೆ ನೆರವೇ ರುವುದೋ ಇಲ್ಲವೋ ಎಂಬ ಚಿಂತೆಯಿಂದಲೇ ಯಾಮುನರು ಮರಣಹೊಂದಿದರು. ಯಾಮುನರನ್ನು ನೋಡಬೇಕೆಂಬ ಉತ್ಕಟೇಚ್ಛೆಯಿಂದ, ಅವರು ಕರೆತರಲು ಕಳುಹಿಸಿದ್ದ ಮಹಾಪೂರ್ಣರೊಂದಿಗೆ ಓಡೋಡಿ ಬಂದ ರಾಮಾನುಜರಿಗೆ ಅವರ ಮೃತದೇಹದ ದರ್ಶನ ಭಾಗ್ಯಮಾತ್ರ ಲಭಿಸಿತು.

ಬ್ರಹ್ಮ ಸೂತ್ರ, ವಿಷ್ಣು ಸಹಸ್ರನಾಮ, ತಿರುವಾಯ್ಮೊಳಿ, ಭಗವದ್ಗೀತೆಗಳಿಗೆ ವಿಶಿಷ್ಟಾದ್ವೈತ ಪರವಾದ ಭಾಷ್ಯವನ್ನು ಬರೆಸಬೇಕು; ವಿಷ್ಣುಪುರಾಣದ ಕರ್ತೃವಾದ ಪರಾಶರ ಮಹರ್ಷಿ ಹಾಗೂ ತಿರುವಾಯ್ಮೊಳಿಯ ಕರ್ತೃವಾದ ಶಠಗೋಪ ಇವರಿಬ್ಬರ ಕೀರ್ತಿಯು ಶಾಶ್ವತವಾಗಿರುವಂತೆ ಮಾಡಬೇಕು, ಎಂಬೀ ಯಾಮುನರ ಅಂತಿಮೇಚ್ಛೆಯನ್ನು

ಕ್ರಿ.ಶ. 916 ರಲ್ಲಿ ತಮಿಳುನಾಡಿನ ದಕ್ಷಿಣ ಆರ್ಕಾಟು ಜಿಲ್ಲೆಯ ವೀರನಾರಾಯಣ ಪುರದಲ್ಲಿ ಹುಟ್ಟಿದ ನಾಥಮುನಿಗಳ ಮೊಮ್ಮಗನೂ, ಈಶ್ವರಭಟ್ಟರ ಮಗನೂ ಆದ ಯಾಮುನಾಚಾರ್ಯರು ಮಹಾಭಾಷ್ಯಭಟ್ಟರಲ್ಲಿ ವಿದ್ಯಾಭ್ಯಾಸಮಾಡಿ ವಿದ್ವಜ್ಜನ ಕೋಲಾಹಲನನ್ನು ವಾಗ್ಯುದ್ಧದಲ್ಲಿ ಸೋಲಿಸಿದ ನಂತರ ಸಂಸಾರ ಸುಖದಲ್ಲಿ ಓಲಾಡುತ್ತಿರುವಲ್ಲಿ ಮಣಕ್ಕಾಲ್ ನಂಬಿಗಳಿಂದ ಶ್ರೀರಂಗನಾಥನತ್ತ ಸೆಳೆಯಲ್ಪಟ್ಟು, ರಂಗನಾಥನ ಸೇವೆಯಲ್ಲಿ ಜೀವನವನ್ನು ಸಾಗಿಸಿದರು. ತಮಗಿಂತ ಹಿಂದಾಗಿ ಹೋದ ಎಲ್ಲ ಹಿರಿಯರ ದೃಷ್ಟಿ ಧೋರಣೆಗಳ ಬಗ್ಗೆ ಸೂಕ್ತ ಅಧ್ಯಯನ ನಡಿಸಿದ್ದಷ್ಟೇ ಅಲ್ಲದೆ ತಮ್ಮದೇ ಆದ ಸ್ವತಂತ್ರ ವಾದವನ್ನು ಮುಂದೆ ಇಟ್ಟರು. ಅದಕ್ಕಾಗಿ ಹಲವಾರು ಪುಸ್ತಕಗಳನ್ನು ಬರೆದರು. ಅವುಗಳಲ್ಲಿ ಚತುಃಶ್ಲೋಕೀ, ಸ್ತೋತ್ರರತ್ನಗಳು ಸ್ತೋತ್ರ ಸಾಹಿತ್ಯದಲ್ಲೂ ಗೀತಾರ್ಥ ಸಂಗ್ರಹ ಸಂಪಾದನ ಸಾಹಿತ್ಯದಲ್ಲೂ ಸೇರಿದರೆ ಆಗಮ ಪ್ರಾಮಾಣ್ಯ, ಮಹಾಪುರುಷನಿರ್ಣಯ ಸಿದ್ಧಿತ್ರಯಗಳು ಶಾಸ್ತ್ರ ಸಾಹಿತ್ಯವಾದವು. ಇದೊಂದು ಸ್ಥೂಲ ವಿಭಜನೆ ಮಾತ್ರ. ವೇದ ಮೂರರ ಸಂಗ್ರಹರೂಪವೇ ಸ್ತೋತ್ರ ರತ್ನವೆಂದು ಹೇಳುವುದೂ ಉಂಟು. ವಿಶಿಷ್ಟಾದ್ವೈತದ ಹಾದಿಯಲ್ಲಿ ಯಾಮುನರ ಕೃತಿಗಳು ಬಹು ಮೊದಲಿನ ಬಹುಮುಖ್ಯವಾದ ಮೈಲಿಗಲ್ಲುಗಳು ಎಂದರೆ ಅತಿಶಯೋಕ್ತಿಯಾಗದು.

ಸಿದ್ಧಿತ್ರಯವೆಂಬುದು ಒಂದು ಪುಸ್ತಕವಲ್ಲ. ಆತ್ಮಸಿದ್ಧಿ, ಈಶ್ವರ ಸಿದ್ಧಿ ಸಂವಿತ್ ಸಿದ್ಧಿ ಎಂಬ ಮೂರು ಕೃತಿಗಳು; ಅನುಕೂಲಕ್ಕಾಗಿ ಮೂರನ್ನೂ ಒಟ್ಟಿಗೆ ಸೇರಿಸಿ ಸಿದ್ಧಿತ್ರಯ ಎಂದರಷ್ಟೆ, ಕಾರಣ ಇಲ್ಲಿನ ಮೂರೂ ಕೃತಿಗಳು ಅಸಂಪೂರ್ಣವಾಗಿ ಉಪಲಬ್ಧವಾಗಿದ್ದು, ಮೂರೂ ಬೇರ್ಬೆ ಬೇರೆ ಕೃತಿಗಳು ಎಂಬುದನ್ನು ಸೂಚಿಸುತ್ತದೆ. ಆಗಮ ಪ್ರಾಮಾಣ್ಯದಲ್ಲಿ ಪಾಂಚರಾತ್ರ ಆಗಮದ ಹಿರಿಮೆ ಗರಿಮೆಗಳನ್ನು ವಿವರಿಸಲಾಗಿದೆ. ಅತಿ ಪ್ರಾಚೀನವೇ ಆಗಿದ್ದರೂ ಅಂದಿಗೆ ಪಾಂಚರಾತ್ರದ ಬಗ್ಗೆ ಅದರ ಪ್ರಮಾಣಭೂತವಾದ ಅಧಿಕೃತತೆಯಲ್ಲಿ ಸಂದೇಹಗಳಿದ್ದಿತೆಂದು, ಈ ಸಂದೇಹಗಳನ್ನು ಇಲ್ಲಿ ದೂರೀಕರಿಸಲಾಗಿದೆ. ಗೀತಾರ್ಥ ಸಂಗ್ರಹ ಭಗವದ್ಗೀತೆಯ ವಿಷಯವನ್ನು ಮೂವತ್ತೆರಡು ಶ್ಲೋಕದಲ್ಲಿ ಸಂಗ್ರಹಿಸಿ ನೀಡುವ ಕೃತಿ. ಚತುಃಶ್ಲೋಕೀ ಶ್ರೀದೇವಿಯ ಕುರಿತಾದ ಶ್ರೀ ವೈಷ್ಣವ ದೃಕ್ಪಥದ ಪರಿಪೂರ್ಣ ಸಾರವತ್ತಾದ ಸ್ತುತಿಯಾದರೆ, ಸ್ತೋತ್ರರತ್ನ 65 ಶ್ಲೋಕಗಳ ವಿಷ್ಣುವಿನ ಬಗ್ಗೆಯಾದ ಸ್ತುತಿ. ಉತ್ಕೃಷ್ಟ ಸಾಹಿತ್ಯದ ಉಲ್ಲೇಖನೀಯ ಉದಾಹರಣೆ ಆಗಿರುವುದರೊಡನೆ ಭಕ್ತಿ ಸಾಹಿತ್ಯದ ಭವ್ಯಗೀತೆಯೂ ಆಗಿದೆ. ಮಹಾಪುರುಷ ನಿರ್ಣಯ ಅನುಪಲಬ್ಧ ಕೃತಿ. ಯಾಮುನರ ಆಗಮಪ್ರಾಮಾಣ್ಯದಲ್ಲೂ, ವೇದಾಂತದೇಶಿಕರ ನ್ಯಾಯಸಿದ್ಧಾಂಜನದಲ್ಲೂ ಉಲ್ಲೇಖಗಳಿವೆಯಷ್ಟೆ.

ಪೂರೈಸುವೆನೆಂದು ಅವರ ಮೃತದೇಹದ ಮುಂದೆ ರಾಮಾನುಜರು ಈರೀತಿ ಪ್ರತಿಜ್ಞೆ ಮಾಡಿದರು.

"ಇವು ನಿಮ್ಮ ಸಂಕಲ್ಪ-ಹಿರಿಯಾಸೆ ಆಗಿದ್ದರೆ ನಾನು ಆರೋಗ್ಯವಾಗಿದ್ದರೆ, ನಿಮ್ಮ ಅನುಗ್ರಹ ನನ್ನ ಮೇಲಿದ್ದರೆ, ದೇವರು ನನ್ನ ಪ್ರಾರ್ಥನೆಯನ್ನು ಮನ್ನಿಸಿದರೆ, ನಿಮ್ಮ ಆಸೆಯನ್ನು ನಾನು ಖಂಡಿತವಾಗಿಯೂ ಪೂರೈಸುತ್ತೇನೆ" ಎಂಬುದಾಗಿ ರಾಮಾನುಜರು ಮಾತುಕೊಟ್ಟಾಗ, ಯಾಮುನರ ಮೃತದೇಹದ ಮಡಿಸಿದ್ದ ಮೂರು ಕೈಬೆರಳುಗಳು ಬಿಚ್ಚಿಕೊಂಡವೆಂದು ಪ್ರತೀತಿ.

ಪೆರಿಯನಂಬಿ, ತಿರುಕ್ಕೋಟ್ಟಿಯೂರ್‌ನಂಬಿ, ತಿರುಮಲೈಯಾಂಡಾನ್, ಪೆರಿಯ ತಿರುಮಲೆ ನಂಬಿ, ಆಳವಂದಾರಾಳ್ವಾನ್, ವಾನಮಾಮಲೈ ಯಾಂಡಾನ್, ತಿರುಕ್ಕಚ್ಚಿ ನಂಬಿ, ಈಶಾಂಡಾನ್, ದೈವವಾರಿಯಾಂಡಾನ್, ಜೆಯರಾಂಡಾನ್, ತಿರುಕ್ಕುರುಹೂರಪ್ಪನ್, ತಿರುಕ್ಕುರು ಹೂರ್‌ದಾಸರ್, ವಡಮದುರೈಪಿರಂದಾರ್, ವಕುಳಾಭರಣ ಸೋಮಯಾಜಿಯಾರ್, ತಿರುಮೋಕೂರಪ್ಪನ್, ತಿರುಮೋಕೂರ್ ಮಿಶ್ರಾನ್, ದೈವಪ್ಪೆರುಮಾಳ್, ತಿರುಮಂಗೈಯಾಳಿಯಾರ್, ತಿರುಮಾಲಿರುಂ ಶೋಲೈದಾಸರ್, ಮಾರನೇರ್‌ನಂಬಿ, ಆಳ್ಕೊಂಡಿಯಮ್ಮಂಗಿ, ಈಂಗಚ್ಚೋಳಾಂಡಾನ್, ರಾಜಪತ್ನಿತಿರುವರಂಗತ್ತಮ್ಮೆ - ಇವರು ಯಾಮುನರ ಮುಖ್ಯ ಶಿಷ್ಯರು. ಈ ಶಿಷ್ಯರಲ್ಲಿ ಮುಖ್ಯರಾದ ಮಹಾಪೂರ್ಣ, ಶ್ರೀಶೈಲಪೂರ್ಣ, ಗೋಷ್ಠೀಪೂರ್ಣ, ಮಾಲಾಧರ, ವರರಂಗನಾಯಕ ಎಂಬೀ ಪಂಚಾಚಾರ್ಯರು ತಾವು ಗುರುಗಳಿಂದ ಕಲಿತಿದ್ದ ವಿಶಿಷ್ಟಾದ್ವೈತದ ಒಂದೊಂದು ರಹಸ್ಯಗಳನ್ನು ರಾಮಾನುಜರಿಗೆ ತಿಳಿಸಿಕೊಟ್ಟು ಅವರು ಸಿದ್ಧಾಂತ ಸ್ಥಾಪನಾಚಾರ್ಯರಾಗಲು ಸಹಾಯಮಾಡಿ ಗುರುಗಳ ಮಹದಿಚ್ಛೆಯನ್ನು ಪೂರ್ಣಗೊಳಿಸಿದರು. ಇವರೆಲ್ಲರೂ ರಾಮಾನುಜರಲ್ಲಿ ಯಾಮುನರನ್ನು ಕಂಡು, ರಾಮಾನುಜರನ್ನೂ ತಮ್ಮ ಗುರುಗಳೆಂದೇ ಭಾವಿಸಿ ಗೌರವಿಸುತ್ತಿದ್ದು ತಮ್ಮ ಮಕ್ಕಳನ್ನು ಅವರ ಶಿಷ್ಯರಾಗಿ ಮಾಡಿದರು.

"ಜಗತ್ತಿನಲ್ಲಿ ಕಳ್ಳರು ಕದಿಯಬಹುದಾದ, ಎಲ್ಲ ಅನರ್ಥಗಳಿಗೆ ಕಾರಣವಾದ, ಇದ್ದರೆ ಭಯ, ಹೋದರೆ ದುಃಖವನ್ನುಂಟುಮಾಡುವ, ತನ್ನವರನ್ನೂ ಶತ್ರುವಾಗಿಸುವ ಹಾಗೂ ದೂರಮಾಡುವ, ನಶ್ವರವಾದ, ಹಣವನ್ನು ಆಶಿಸುವವರೆಲ್ಲ ಅಜ್ಞಾನಿಗಳು. ಜೀವನದಲ್ಲಿ ನಮ್ಮನ್ನು ಸದಾ ರಕ್ಷಿಸುವ, ಪರಲೋಕವನ್ನು ತಂದುಕೊಡುವ, ಸುಖ ಆನಂದಗಳನ್ನು ನೀಡುವ, ಭಗವಂತನನ್ನೂ ವಶಪಡಿಸಿಕೊಳ್ಳಬಲ್ಲ, ಶರಣಾಗತಿ ಎಂಬ ಸಂಪತ್ತನ್ನು ಆಶಿಸುವವರೆಲ್ಲ ಜ್ಞಾನಿಗಳು.

"ಪ್ರಪನ್ನನಾದವನು ಭಗವಂತನ ಅಧೀನವಾದ ಆತ್ಮಯಾತ್ರೆ, ಕರ್ಮದ ಅಧೀನವಾದ ಶರೀರಯಾತ್ರೆ, ಇವೆರಡೂ ತನಗೆ ಅನ್ವಯಿಸುವುದಿಲ್ಲ ಎಂದು ಭಾವಿಸಬೇಕು. ಭಗವಂತ, ಆಚಾರ್ಯ, ಭಾಗವತ ಈ ಮೂರೂ ಆರಾಧಿಸಲು ಯೋಗ್ಯವಾದ ವಸ್ತುಗಳು, ಭಗವಂತನಾದ ಲಕ್ಷ್ಮೀನಾರಾಯಣನೇ ನಮಗೆಲ್ಲ ಒಡೆಯ, ಸ್ವಾಮಿ, ನಾವೆಲ್ಲ ಆತನ ಭೃತ್ಯರು, ಅಧೀನವಸ್ತುಗಳು. ಆತ್ಮರಕ್ಷಣೆಯ ಬಗ್ಗೆ ಭಗವಂತನಲ್ಲಿ ಸಂಪೂರ್ಣ ಭರವಸೆಯನ್ನಿಟ್ಟು ಆತನ ಮಹಾಸಂಕಲ್ಪವನ್ನು ಸಾಧಿಸುವ ಸಲುವಾಗಿ ನಾವೆಲ್ಲ ಕೇವಲ ಯಂತ್ರಗಳು ಎಂದು ತಿಳಿದು, ಆತನ ಪ್ರೇರಣೆಯಂತೆ ನಡೆಯಬೇಕು.

"ಭಗವಂತನ ಪ್ರತ್ಯಕ್ಷಮೂರ್ತಿಯಾದ ಭಕ್ತನನ್ನು ಜಾತಿಮತ ಮುಂತಾದ ಭೇದವೆಣಿಸದೆ ಸೇವಿಸುವುದೆಂದರೆ ವಾಙ್ಮನಸ್ಸುಗಳಿಗೆ ಅತೀತನಾದ ಭಗವಂತನನ್ನೇ ಸೇವಿಸಿದಂತೆ ಎಂದು ತಿಳಿಯಬೇಕು. ಭಗವಂತನ ಅವತಾರಗಳನ್ನು ಹಾಗೂ ಅವನ ಪ್ರತಿಮೆ, ವಿಗ್ರಹ, ಸಾಲಿಗ್ರಾಮ ಶಿಲೆಗಳನ್ನು ಶ್ರದ್ಧಾಭಕ್ತಿಗಳಿಂದ, ನಮ್ರತೆ - ವಿನಯಗಳಿಂದ ಪೂಜಿಸಬೇಕು. ತೀರ್ಥಪ್ರಸಾದಗಳನ್ನು ಸ್ವೀಕರಿಸುವ ಸಮಯದಲ್ಲಿ ಅರ್ಥಕಾಮ ಪರವಶರಾಗಿರಬಾರದು.

"ಗುರುಪರಂಪರೆಯ ಅನುಸಂಧಾನ ಪೂರ್ವಕವಾಗಿಯೇ ಮಂತ್ರಗಳನ್ನು ಅನುಸಂಧಾನ ಮಾಡಬೇಕು. ಶ್ರೀರಂಗವು ಮೂಲಮಂತ್ರಾರ್ಥ, ಕಂಚಿಯೇ ದ್ವಯಮಂತ್ರಾರ್ಥ, ತಿರುಮಲೆಯೇ ಶರಣಾಗತಿ ಮಂತ್ರಾರ್ಥ ಎಂದು ತಿಳಿದು ಪ್ರಪತ್ತಿ ಮಾಡಿ ಭಗವಂತನನ್ನು ಸೇವಿಸಬೇಕು.

"ದುಃಖ, ನೋವುಗಳಿಗೆಲ್ಲ ಕಾರಣವಾದ ನಾನು, ನನ್ನದು ಎಂಬ ಅಹಂಕಾರ, ಮಮಕಾರಗಳನ್ನು ಬಿಟ್ಟು, ನಾವೆಲ್ಲ ಭಗವಂತನ ಸೇವಕರು ಎಂಬ ಭಾವನೆಯನ್ನು ಬೆಳೆಸಿಕೊಂಡು ದೃಢಗೊಳಿಸಿ ನಡೆದುಕೊಂಡರೆ, ನಮ್ಮಲ್ಲಿ ನಿಷ್ಕಾಮ ಪ್ರೇಮವಿದ್ದರೆ, ಹುಟ್ಟು - ಸಾವುಗಳನ್ನು ಗೆದ್ದು, ಶ್ರೀಮನ್ನಾರಾಯಣನ ಸಾನ್ನಿಧ್ಯದಲ್ಲಿ ಆನಂದವಾಗಿ ಇರಬಹುದು."

--ಇದು ಯಾಮುನರ ಚರಮ ಸಂದೇಶ.

ಯಾಮುನರಿಗೆ ಶೊಟ್ಟೆನಂಬಿ, ತೈವಟ್ಟುಕ್ಕರಸು ನಂಬಿ, ಪಿಳ್ಳೈ ಅರಸುನಂಬಿ, ತಿರುವರಂಗಪ್ಪೆರುಮಾಳ್ ಅರೈಯರ್ ಎಂಬ ನಾಲ್ವರು ಮಕ್ಕಳಿದ್ದರು. ಎರಡನೆಯ ಮಗನಾದ ತೈವಟ್ಟುಕ್ಕರಸು ನಂಬಿ ಅಥವಾ ದೇವಾಧಿರಾಜನಿಗೆ ತಿರುಮಲೈ ನಂಬಿ (ಶ್ರೀಶೈಲ ಪೂರ್ಣ) ಎಂಬ ಮಗ, ಭೂಮಿಪ್ಪಿರಾಟ್ಟಿ (ಕಾಂತಿಮತಿ) ಮತ್ತು ಪೆರಿಯಪ್ಪಿರಾಟ್ಟಿ (ದ್ಯುತಿಮತಿ) ಎಂಬ ಹೆಣ್ಣುಮಕ್ಕಳು ಇದ್ದರು. ಕಾಂತಿಮತಿಯು ಶ್ರೀ ಪೆರಂಬೂದೂರಿನ ಆಸೂರಿಕೇಶವಾಚಾರ್ಯರನ್ನು ಮದುವೆಯಾಗಿ ರಾಮಾನುಜರನ್ನು ಪಡೆದಳು. ದ್ಯುತಿಮತಿಯು ಕಮಲನಯನಭಟ್ಟರನ್ನು ವಿವಾಹವಾಗಿ ಗೋವಿಂದನನ್ನು ಪಡೆದಳು. ಯಾಮುನರ ಇನ್ನೊಬ್ಬ ಮಗ ತಿರುವರಂಗಪ್ಪೆರುಮಾಳ್ ಅರೈಯರ್ (ವರರಂಗನಾಯಕ) ತಿರುವಾಯ್ಮೊಳಿಯನ್ನು ಸಂಗೀತಕ್ಕೆ ಅಳವಡಿಸಿದರು. ಹೀಗೆ ಯಾಮುನರ ಜೊತೆಗೆ ಅವರ ಮಕ್ಕಳು ಹಾಗೂ ಮೊಮ್ಮಕ್ಕಳ ಮಕ್ಕಳಿಂದ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ವಿಶೇಷ ಕೊಡುಗೆ, ಸೇವೆಗಳು ದೊರೆತಿವೆ.

(ಶ್ರೀ ವೈಷ್ಣವ ಆಚಾರ್ಯ ಪರಂಪರೆಯಿಂದ)

# ಚತುಃಶ್ಲೋಕೀ

---ಡಾ|| ವಿ.ಎಸ್. ಸಂಪತ್ಕುಮಾರಾಚಾರ್ಯ.

ರಾಮಾನುಜಾಚಾರ್ಯರಿಗಿಂತ ಹಿಂದಿನ ಆಚಾರ್ಯರಲ್ಲಿ ಯಾಮುನಾಚಾರ್ಯರ ಸ್ಥಾನವು ವಿಶಿಷ್ಟವಾದುದು. ಅವರು ತಮಿಳುನಾಡಿನ ದಕ್ಷಿಣ ಆರ್ಕಾಟ್ ಜಿಲ್ಲೆಯ ವೀರನಾರಾಯಣ ಪುರದಲ್ಲಿ ನಾಥಮುನಿಗಳ ಪುತ್ರರಾದ ಈಶ್ವರಭಟ್ಟರ ಪುತ್ರರಾಗಿ ಸು. ಕ್ರಿ. ಶ. ೯೧೬ ರಲ್ಲಿ ಜನ್ಮತಾಳಿದರು. ಆಳವಂದಾರ್ ಎಂಬ ಹೆಸರು ಪಡೆದು ಪ್ರಸಿದ್ಧರಾದರು. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಭದ್ರವಾದ ತಳಹದಿಯ ಮೇಲೆ ನಿಲ್ಲಿಸಲು ಹಲವು ಗ್ರಂಥಗಳನ್ನು ರಚಿಸಿದರು.

ತಾವು ಭಗವದ್ದರ್ಶನ ಮಾಡಿ ಅನುಭವಿಸಿದ ಆನಂದವನ್ನು ಎಲ್ಲರೂ ಅನುಭವಿಸಿ ಉದ್ಧಾರವಾಗಬೇಕೆಂದು ಸ್ತೋತ್ರರತ್ನ ಮತ್ತು ಚತುಃಶ್ಲೋಕೀ ಎಂಬ ಪ್ರಸಿದ್ಧವಾದ ಸ್ತೋತ್ರಗಳನ್ನು ರಚಿಸಿದರು. ಕಾಂತಾನಾಯಕನ ವಿಷಯವಾದ ಸ್ತೋತ್ರವು ಸ್ತೋತ್ರರತ್ನ, ತದುತ್ತರ ಶ್ರೀದೇವಿಯ ಮಹೀಮಾವರ್ಣನೆಯನ್ನು ಅವಳಿಂದ ಜಗದುದ್ಧಾರಕ್ಕೆ ಏರ್ಪಡುವ ಉಪಕಾರವನ್ನು ಸಂಗ, ಸೌಭಾಗ್ಯ ಕರ್ತವ್ಯ ಇವುಗಳನ್ನು ಕಾಂತಾ ಸ್ತೋತ್ರವೆಂಬ ಚತುಃಶ್ಲೋಕಿಯಲ್ಲಿ ಕಾಣಬಹುದು. ಈ ಸ್ತೋತ್ರವೇ ಮೊಟ್ಟಮೊದಲು ರಚಿತವಾದ ವೈಷ್ಣವ ಸಂಪ್ರದಾಯದ ಲಕ್ಷ್ಮೀಸ್ತೋತ್ರ. ಇದನ್ನು ಈಗಲೂ ಪ್ರತಿದಿನವೂ ಅನುಸಂಧಾನ ಮಾಡುವ ವಾಡಿಕೆಯಿದೆ. ಲಕ್ಷ್ಮೀಕಟಾಕ್ಷ ಉಂಟಾಗುವುದೆಂಬ ಅನುಭವಸಿದ್ಧವಾದ ನಂಬಿಕೆಯಿಂದ ಶ್ರದ್ಧಾವಂತರಾದ ಸ್ತ್ರೀಯರು ನಿತ್ಯವೂ ಸಂಧ್ಯಾಕಾಲದಲ್ಲಿ ಈ ಸ್ತೋತ್ರವನ್ನು ದೇವರ ಸನ್ನಿಧಿಯಲ್ಲಿ ಪಠಿಸುತ್ತಾರೆ.

ವಿಗಾಹೇ ಯಾಮುನಂ ತೀರ್ಥಂ
ಸಾಧು ಬೃಂದಾವನೇ ಸ್ಥಿತಮ್
ನಿರಸ್ತ ಜಿಹ್ಮಗಸ್ಪರ್ಶೇ
ಯತ್ರ ಕೃಷ್ಣಃ ಕೃತಾದರಃ

ಸತ್ಪುರುಷ ಸಮೂಹಗಳ ರಕ್ಷಣೆಗಾಗಿ ಏರ್ಪಟ್ಟು, ದುಷ್ಟರ ಸ್ಪರ್ಶವಿಲ್ಲದಂತಾಗಿ, ಶ್ರೀಕೃಷ್ಣನ ಆದರಕ್ಕೆ ಪಾತ್ರರಾದ ಯಾಮುನಾಚಾರ್ಯರ ಸೂಕ್ತಿ ಎಂಬ ತೀರ್ಥದಲ್ಲಿ ಮುಳುಗಿ ಸ್ನಾನ ಮಾಡುತ್ತೇನೆ.

ಕಾನ್ತಸ್ತೇ ಪುರುಷೋತ್ತಮಃ
ಫಣಿಪತಿಃ ಶಯ್ಯಾ ಆಸನಂ;
ವಾಹನಂ ವೇದಾತ್ಮಾ ವಿಹಗೇಶ್ವರಃ;
ಯವನಿಕಾ ಮಾಯಾ ಜಗನ್ಮೋಹಿನೀ
ಬ್ರಹ್ಮ ಈಶಾದಿ ಸುರವ್ರಜಃ
ಸದಯಿತಃ ತ್ವದ್ದಾಸದಾಸೀಗಣಃ
'ಶ್ರೀ' ಇತ್ಯೇವ ಚ ನಾಮತೇ;
ಭಗವತಿ, ಬ್ರೂಮಃ ಕಥಂ ತ್ವಾಂ ವಯಂ

ನಿನ್ನಕಾಂತ ಪುರುಷೋತ್ತಮ; ಶಯ್ಯೆ ಮತ್ತು ಆಸನ ಫಣಿಪತಿಯಾದ ಆದಿಶೇಷ; ವಾಹನವೋ ವೇದಾತ್ಮನಾದ ಪಕ್ಷಿರಾಜ ಗರುಡ; ಯವನಿಕೆಯೋ ಜಗನ್ಮೋಹಿನಿಯಾದ ಮಾಯೆ; ನಿನ್ನ ದಾಸದಾಸೀಗಣಗಳೋ ಪತ್ನೀಸಹಿತರಾದ ಬ್ರಹ್ಮ ಶಿವ ಮುಂತಾದ ದೇವತೆಗಳ ಸಮೂಹಗಳು; ನಿನ್ನ ಹೆಸರೋ 'ಶ್ರೀ' ಎಂದು. ಇಂತಹ ನಿನ್ನನ್ನು ಎಲೈ ಭಗವತಿಯೇ! ನಾವು ಹೇಗೆ ತಾನೇ ಸ್ತುತಿಸೇವು?

ವಿಶೇಷಾರ್ಥ : ಈಶ್ವರಕಾಂತೆಯನ್ನು ಉದ್ದೇಶಿಸಿ ಯಾಮುನಾಚಾರ್ಯರು ಈ ಶ್ಲೋಕದಲ್ಲಿ ಬಿನ್ನವಿಸಿದ್ದಾರೆ. ಕಾಂತಸ್ತೇ - ಇದರಲ್ಲಿ ಕಾಂತ ಶಬ್ದವು ಅತಿ ಮುಖ್ಯ. ಶ್ರೀದೇವಿಯ ಮನಸ್ಸಮರ್ಪಕವಾಗಿ ದೊರಕಿದ ಸಂಗಡಿಗನು ಸಮರ್ಪಕವಾಗಿರುವುದರಿಂದ ದೇಸರಕ್ಕೆ ಅವಕಾಶವಿಲ್ಲ. ಆ ಕಾರಣ ನಿತ್ಯ ಯೋಗ. ಶ್ರೀದೇವಿಯ ಸಹವಾಸದಿಂದ ಸಂಗಡಿಗನಿಗೆ ದೊರಕಿದ ಒಂದು ಅಮೃತಸ್ಥಾನವೆಂದರೆ ಪುರುಷೋತ್ತಮತ್ವ. ಪುರುಷಃ; ಉತ್‌ಪುರುಷಃ; ಉತ್ತರ ಪುರುಷಃ; ಉತ್ತಮಪುರುಷಃ - ಎಂದು ಈ ಶಬ್ದಕ್ಕೆ ವೈಲಕ್ಷಣ ಕಾಣಬಹುದು. ಪುರುಷ ಎಂದರೆ ತನ್ನ ಯತ್ನದಿಂದ ಲಭ್ಯವಾದ ಸಕಲ ಭೋಗೋಪಕರಣಗಳನ್ನು ಮಡದಿಗೆ ಅಯತ್ನ ಲಕ್ಷ್ಮವನ್ನಾಗಿ ಬಯಕೆಗಿಂತ ಮಿಗಿಲಾಗಿ ನೀಡಬಲ್ಲಪತಿ. ಇದು ಕನ್ಯಾದಾನ ಶುಲ್ಕ ವರದಕ್ಷಿಣೆ ಅಲ್ಲ. ಸಂಪಾದಿಸಬಲ್ಲ ವ್ಯಕ್ತಿಗೆ ಪುರುಷ ಎಂದು ಹೆಸರು. ಬಯಕೆಗಿಂತ ಮಿಗಿಲಾದ ಭೋಗೋಪಕರಣಗಳ ನೀಡಿಕೆ ಪುರುಷ ಶಬ್ದಾರ್ಥ. ಇದು ಸ್ವಪ್ರಯತ್ನ ಫಲವಾಗಿ ತನ್ನದಾಗಿರಬೇಕು. ಗಿರವಿ ಪದಾರ್ಥವಲ್ಲ. ಅಂಥವನು ಸಹವಾಸಕ್ಕೆ ಅರ್ಹನು, ಶ್ರೇಷ್ಠನು, ವರ. ರಕ್ಷಣೆ ವ್ಯಾಪಾರದಲ್ಲಿ ಉಪಕರಣಗಳನ್ನೆಲ್ಲಾ ನೀಡಬಲ್ಲವನು, ಯಾವ ಸಂದರ್ಭದಲ್ಲೂ ಅವಳಿಗೆ ಅತೃಪ್ತಿ ಅಸಮಾಧಾನ ವಿಲ್ಲದಂತೆ, ಪರಸಹಾಯವಿಲ್ಲದಂತೆ ನಿರ್ವಹಿಸಬಲ್ಲವನು ಪುರುಷ. ಇಂಥವನು ಮನುಷ್ಯರಲ್ಲಿ ದೊರಕಬಹುದು.

ಉತ್ ಪುರುಷಃ - ಸಾಮಾನ್ಯ ಮನುಷ್ಯನಿಗಿಂತ ಮೇಲಾದವನು. ಇವನು ದೇವತೆಯಾಗುತ್ತಾನೆ. ಹಾಗೆಂದರೆ ಮೋಕ್ಷಪಡೆದ ಭೂಲೋಕದಿಂದ ಪರಮಪದಕ್ಕೆ ತೆರಳಿದ ಚೇತನ. ಉತ್ತರ ಪುರುಷನು ಅವನಿಗಿಂತ ಮೇಲಾದವನು. ತಾರತಮ್ಯ ಪ್ರಕಾಶಪಡಿಸುವ ಸಂದರ್ಭ ಇವನು ನಿತ್ಯಸೂರಿ. ಸಂಸಾರದ ಸೋಂಕರಿಯದವನು. ಉತ್ತಮ ಪುರುಷ - ಎಲ್ಲರಿಗಿಂತ ಮಿಗಿಲಾದವನು. ಅವನು ತನ್ನ ಮಹಿಮೆಯನ್ನು ಪ್ರಕಾಶಪಡಿಸಿ, ಅವನ್ನು ಕಂಡು ಅತಿ ತೃಪ್ತಿಯಾಗಿ, ಕ್ಷಣವೂ ಅವನನ್ನು ಬಿಡದೆ ಇರುವ ಮಹಿಷಿ ಶ್ರೀದೇವಿ. ಮೊಟ್ಟಮೊದಲಾಗಿ ಅವನು ಈ ಭಾಗ್ಯವನ್ನೆಲ್ಲಾ ಒದಗಿಸಬಲ್ಲ ಸಮೃದ್ಧಿ ಪಡೆದವನು. ಅವನ ವೈಯಕ್ತಿಕ, ಸ್ವರೂಪವು ಸರ್ವಭೋಗ್ಯವಾದುದು. ಅದು ಪೂರ್ಣತೆಯಿಂದ ಕೂಡಿದ ಆಕರ್ಷಕತೆ. ಇದು ಪುರುಷೋತ್ತಮನಲ್ಲಿ ಮೂಡಿದರೂ, ಇದರ ಅನುಭವಕ್ಕೆ ಅಧಿದೇವತೆಯಾದ ಶ್ರೀದೇವಿಯು ಕಂಡುಕೊಂಡು ಅವನನ್ನು ಸದಾ ಸೇರಿಕೊಂಡಿರುತ್ತಾಳೆ. ತತ್ಕಾರಣ ಕಾಂತತ್ವ ಸ್ವರೂಪ, ಗುಣ ಮತ್ತು ವ್ಯಾಪಾರಗಳನ್ನು ಒಳಗೊಂಡಿರುವುದರಿಂದ ಮಹಾಲಕ್ಷ್ಮಿಯ ದೃಷ್ಟಿಯಿಂದ ಅವಳಿಗೆ ತೃಪ್ತಿ ಸಂತೋಷ ಪ್ರದನಾದವನು ಪುರುಷೋತ್ತಮನು.

ಮತ್ತೊಂದು ರೀತಿಯಲ್ಲಿ ಅವಳಿಗೆ ತನ್ನ ಪೂರ್ಣತೆಯ ಪ್ರಕಟಣೆಯಿಂದ ಸದಾ ಸಂಗದ ಆಸಕ್ತಿಯನ್ನುಂಟು ಮಾಡುವವನು. ನಾರೀಣಾಂ ಉತ್ತಮ ವಧು ಶ್ರೀದೇವಿ. ನರಸಿಂಹಃ - ನರಗಳ ಗುಂಪಿನಲ್ಲಿ ಸಿಂಹ ಸದೃಶರಾಜ ಉತ್ತಮ. ಆದ್ದರಿಂದ ಸರ್ವವಿಧದಲ್ಲೂ ಅನ್ಯೋನ್ಯ ದಾಂಪತ್ಯ ಸಾಂಗತ್ಯ ಉಚಿತ. ಈಶ್ವರನಿಗೆ ಮನಸ್ತೃಪ್ತಿ ಉಂಟಾದಂತೆ ಶ್ರೀದೇವಿಗೂ ಆಶಾಪೂರ್ತಿ ಏರ್ಪಟ್ಟಿತು. ಪುರುಷಲಕ್ಷಣ ಒಡನಾಡಿಗಳನ್ನು ಸುಖದ ನೆಪದಲ್ಲಿ ಎಂದೆಂದಿಗೂ ಉಳಿಸಿಕೊಳ್ಳಬಲ್ಲ ಶಕ್ತಿ. ಈಶ್ವರನಿಗೆ ಪ್ರೀತಿ ಭಾಜನವಾದರೆ ಅವನ ಕಾಂತೆಯ ವೈಭವದಿಂದ ಪ್ರಣವದಿಂದ ನಾವು ತಿಳಿಯಬಹುದಾದ ಅರ್ಥ - ಅಕಾರ ವಾಚ್ಯನಾದವನು ಪುರುಷೋತ್ತಮ. ಮಕಾರ ವಾಚಿ ಶ್ರೀದೇವಿ. ಅಕಾರದಲ್ಲಿ ತೋರಿಬಂದ ರಕ್ಷಣ ವ್ಯಾಪಾರ, ಈಶ್ವರನ ಮನಸ್ತೃಪ್ತಿಗೆ ದ್ವಾರ ಭೂತವಾದುದು, ಮಕಾರವನ್ನು ಸಲಹುವ ರೀತಿ ಮತ್ತು ಅಕಾರದಲ್ಲಿ ಪರಿಶುದ್ಧತೆ. ಮಕಾರದಲ್ಲಿ ತೋರಿಬರುವ ಅಚಿನ್ನಿಮಿತ್ತವಾದ ದೋಷಗಳು ಕಣ್ಮರೆ. ಅದು ಕಾಣಿಸಿಕೊಳ್ಳಬೇಕಾದರೆ ಫಲ ಹೊಂದಿದ ವ್ಯಕ್ತಿಯ ದರ್ಶನದಲ್ಲಿ, ರಕ್ಷಣೆಗಾಗಿ ಸದಾ ಈಶ್ವರನು ಕೂಡ ಇರುವನು. ಅವನ ಭೋಗವನ್ನು ಸ್ಥಿರಪಡಿಸಲು ಇವಳೂ ಸಹ ಯಾವಾಗಲೂ ಪರಿಶುದ್ಧಳು. ಈಶ್ವರನ ಕರ್ತವ್ಯ ರಕ್ಷಣಾವೃತ್ತಿ. ಇವಳು ಅದಕ್ಕೆ ಅನುಕೂಲವಾಗಿಯೇ ಇರುತ್ತಾಳೆ. ಇದು ದಿವ್ಯ ದಾಂಪತ್ಯಪ್ರಭಾವ.

ಕಾಂತನಾದ ಈಶ್ವರನಿಗೆ ಏಕೈಕಧ್ಯೇಯ ತನ್ನ ಮಹಿಷಿಗೆ, ತನ್ನ ಹಿರಿಮೆಗೆ ತಕ್ಕರೀತಿಯನ್ನು ಸ್ಥಾನಮಾನವನ್ನು ಹೊಂದಿಸಬೇಕೆಂಬುದು. ತಾನೂ

ಅವರಲ್ಲಿ ಪಾಲ್ಗೊಳ್ಳುವನು. ಅಂದಮೇಲೆ ಉಭಯ ಸ್ವಾಮಿತ್ವವು ಸಹಜ. ಶ್ರೀದೇವಿಗೆ ಅನುಗ್ರಹ ಮಾಡುವುದರಲ್ಲಿ ಎಷ್ಟು ಉಲ್ಲಾಸವಾಗುತ್ತದೋ ಭಗವಂತನೂ ಅದನ್ನು ಅನುಭವಿಸುತ್ತಾನೆ. ಶ್ರೀದೇವಿಯೂ, ಶ್ರೀಕಾಂತನೂ ಯಾವಾಗಲೂ ಸಂಗತ್ಯಾಗವಿಲ್ಲದವರು. ತತ್ಕಾರಣ ಪರಿಕರಗಳೆಲ್ಲಾ ಮಿಥುನ ಶೇಷತ್ವ ಅಂದರೆ ಶ್ರೀದೇವಿಗೂ, ಆಕೆಯ ಕಾಂತನಿಗೂ ಸೇವೆ ಸಲ್ಲಿಸುತ್ತವೆ. ಶ್ರೀದೇವಿಯು ಮಾತ್ರ ಸಂಗದ ಪ್ರಭಾವವರಿತು ಈಶ್ವರನಿಗೆ ಚಿರಋಣಿ. ಪುರುಷಕಾರಭೂತೆ ಎಂಬ ಅನುಪಮ ಸ್ವಭಾವವನ್ನು ಪ್ರಕಟಿಸಲು ಚೇತನರಲ್ಲಿ ಈಶ್ವರಾಭಿಮುಖವಾದ ಭಕ್ತಿ ಉಂಟುಮಾಡುತ್ತಾಳೆ. ಇವಳ ಮನಸ್ಸನ್ನು ಇಟ್ಟುಕೊಂಡಿರುವ, ಅವಳೊಡನೆ ತಾನೂ ಅನುಭವಿಸಲು ಇಚ್ಛೆಪಡುವ ಆಕರ್ಷಕ ದ್ರವ್ಯ ಪುರುಷೋತ್ತಮ. ಕಃ ಶ್ರೀಃ, ಶ್ರಿಯಃ - ಎಂಬ ಆಚಾರ್ಯರ ನುಡಿಯಂತೆ ಶ್ರೀಯನ್ನು ಶ್ರೀದೇವಿಗೆ ಒದಗಿಸಿದ್ದಾನೆ. ತತ್ಕಾರಣ ಈಶ್ವರನು ಪುರುಷೋತ್ತಮನಾಗುತ್ತಾನೆ. ಅಂದರೆ ಶಾಶ್ವತ, ಪೂರ್ಣ, ನಿಜವಾದ ಉತ್ಪಾದಕ, ಪೋಷಕ, ಸಂಗಡಿಗ ಮತ್ತು ಭೋಗ ಪ್ರದಾನದಿಂದ ಭೋಗವನ್ನು ಅನುಭವಿಸಬಲ್ಲ ವ್ಯಕ್ತಿ. ಒಂದು ವ್ಯಕ್ತಿಯಲ್ಲಿ ಇವೆಲ್ಲವನ್ನೂ ಪ್ರಕಾಶಪಡಿಸಿರುವ ವ್ಯಕ್ತಿ ಶ್ರೀದೇವಿ. ಇದು ಪೋಷ್ಯಪೋಷಕ ಭಾವಸಂಬಂಧ. ಕಾಂತನ ಮಹಿಮೆ ಅವನ ಕಾಂತೆಯ ಮೂಲಕ ಬಹಿರಂಗವಾಗುತ್ತದೆ. ಶ್ರೀರಾಮಚಂದ್ರನ ವ್ರತ ಇದೇ. - ನ ತ್ಯಜೇಯಂ ಕಥಂ ಚ ನ - ಈ ಸಂಬಂಧ ಏರ್ಪಟ್ಟ ಮೇಲೆ ಸಂಭವಿಸುವ ಭಾಗ್ಯ ಶ್ರೇಣಿಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಭೋಗಕ್ಕೆ ಪ್ರಥಮವಾದ ಉಪಕರಣ ಶಯ್ಯೆ ಫಣಿಪತಿಃ ಶಯ್ಯಾ ಆಸನಂ - ಸರ್ಪರಾಜ ಸೌಕುಮಾರ್ಯಕ್ಕೆ ಪಂಚವಿಧವಾದ ಸೌಕರ್ಯಗಳನ್ನು ನಿದ್ರಾವೇಳೆಯಲ್ಲಿ, ಎಚ್ಚೆತ್ತಿರುವಾಗ ಒದಗಿಸಬಲ್ಲ ಹಾಸಿಗೆ ಮತ್ತು ಆಸನ. ತತ್ಕಾರಣ ಇದಕ್ಕೆ ಪ್ರಥಮ ಉಪಾದಾನ.

ಸಂಚಾರಕ್ರಮದಲ್ಲಿ - ವೇದಾತ್ಮಾ ವಿಹಗೇಶ್ವರಃ - ಆಕಾಶದಲ್ಲಿ ಹಾರಬಲ್ಲ ಮತಂಗರಾಜ, ವೇದಾಕ್ಷರಮಯನಾದವನು. ಪ್ರತಿ ಅಂಶದಲ್ಲೂ ಶ್ರಿಯಃ ಪತಿಯ ಮಹಿಮೆಯನ್ನು ವೇದಾಕ್ಷರರೂಪದಲ್ಲಿ ಪ್ರಪಂಚದಲ್ಲೆಲ್ಲಾ ಹರಡುವುದಕ್ಕಾಗಿ ಏರ್ಪಟ್ಟ ಸಾಧನ. ಇವನು ಪಕ್ಷಿರಾಜ. ಇವನ ಮೈಯೆಲ್ಲ ವೇದಾಕ್ಷರ. ಪಕ್ಷಿಗೆ ಅನುಚಿತವಾದುದು ಯಾವುದೂ ಇಲ್ಲ.

ಯವನಿಕಾಮಾಯಾ - ಮಾಯೆ ಎನ್ನುವುದು ಮುಸುಕು. ತಾನು ನೇರವಾಗಿ ಕಾಣಲು ಬಂದರೆ ಪ್ರಜೆಗಳು ಅವನ ಕಡೆ ತಿರುಗಿ ಸಾಧುಗಳಾಗುತ್ತಾರೆ. ಅವನ ಪರೋಕ್ಷದಲ್ಲಿ ನೋಟ ನಡತೆ ವಿಚಿತ್ರ. ಅದೇ ಸಂಸಾರ. ಪರಮಾತ್ಮನು ಅಂತರ್ಯಾಮಿ. ಇದೇ ಯವನಿಕೆ, ಅಗೋಚರತೆ, ಮಾಯಾ. ಜಗನ್ಮೋಹಿನೀ - ಇದರಿಂದ ಸಂಸಾರಿಗಳಿಗೆ ದುಃಖವೇ ಪಟ್ಟರೂ ಜ್ಞಾನ ಶೂನ್ಯರಾದರೂ ಅದೇ ಸುಖವೆಂದು ಭ್ರಮಿಸಿ ಓಲಾಡುತ್ತಾರೆ. ಮೋಹಿನೀ - ಅಜ್ಞಾನ ಉಂಟುಮಾಡುವ ತಾತ್ಕಾಲಿಕ ಆವರಣ.

ಬ್ರಹ್ಮೇಶಾದಿ ಸುರವ್ರಜಃ ಸದಯಿತಃ - ಬ್ರಹ್ಮನೇ ಮೊದಲಾದ ಸಕಲ ದೇವತೆಗಳು ತಮ್ಮ ಪತ್ನಿಯರೊಡನಿದ್ದರೂ ಅವರಿಗೆ ಕ್ಲುಪ್ತವಾದ ಕೆಲಸಗಳನ್ನು ತೋರಿಸುತ್ತಾರೆ. ಪತಿ ಶುಶ್ರೂಷೆಯಲ್ಲಿ. ಸಹಪತಿಕರಾಗಿ ಪರಬ್ರಹ್ಮನ ಶುಶ್ರೂಷೆ. ಅವರೇ ಭಗವಂತನಿಗೆ ದಾಸದಾಸೀಗಣ. ವಿವಾಹ ಧರ್ಮಾರ್ಥವಾಗಿ ಸ್ತ್ರೀಪುರುಷ ಸಂಯೋಗ ಏರ್ಪಡಿಸಿದೆ. ಅದನ್ನರಿಯದೆ ಭೋಗ ಬಯಸಿದರೆ ಔಷಧಾಲಯವೇ ಗತಿ.

'ಶ್ರೀಃ' ಇತ್ಯೇವ ಚ ನಾಮತೇ - ನಿನ್ನ ಹೆಸರು ಶ್ರೀ ಎಂಬುದಾಗಿಯೇ. ಈ ಶಬ್ದದಿಂದ ಸಾಂಗತ್ಯದ ಅಗತ್ಯ ಪ್ರಜೆಗಳ ಕ್ಷೇಮಕ್ಕೆ ದುಡಿಮೆ. ಚೇತನ ಈಶ್ವರರ ವಿರೋಧ ವಿನಾಶ. ಇವನ್ನೆಲ್ಲ ಈಶ್ವರನಿಗೂ ಅರಿವಿಗೆ ತರುವುದೇ ಆಗಿರುತ್ತದೆ. ಅಂದರೆ ಶಾರೀರಕ ಭಾವನೆ ಏರ್ಪಡುತ್ತದೆ. ಭಗವತಿ - ಇಂಥ ಮಂಗಳ ಗುಣಗಳುಳ್ಳವಳು. ಪ್ರಣವದ ಮ
ಮಾಕ್ಷರದ ಪ್ರಯೋಜನವನ್ನು ಕೈಬಿಡದೆ ಪ್ರಥ
ಚರಮಾಕ್ಷರ ಉಳಿಸಿಕೊಳ್ಳುವುದೇ ಅವನ ಪ್ರಧಾ
ಸಹಜ ಕೃತ್ಯ. ಅನೇಕ ಉಪಕಾರರೂಪದಲ್ಲಿ ಪ
ಣಮಿಸುವ ಅವಳ ಮನೋ ದೃಷ್ಟಿ, ನಿಷ್ಠೆ, ಕೃ
ವನ್ನು ತಿಳಿಗೇಡಿಗಳಾದ ನಾವು - ಬ್ರೂಮಃ ಕಥಂ
ಏನೆಂದು ಹೇಳುವುದು. ಸಮಸ್ತ ಲೋಕಕ್ಕೂ ಸ್ವ
ಅರಿಯಲಾರದ ಅಪ್ರಮೇಯವಾದ, ಈಶ್ವರನಿಗು
ಸಂತೋಷ ಜನಕವಾದ ಗುಣಗಳು ಕಾಣುವ
ರಿಂದ ಧರ್ಮಾಚರಣೆ ಮತ್ತು ಭಗವಂತನು ಇ
ಯಲು ಶ್ರೀದೇವಿಯ ಸಾಂಗತ್ಯವು ಕಾರಣ ಎಂದ
ಯಾಮುನಾಚಾರ್ಯರು ಈ ಶ್ಲೋಕದಲ್ಲಿ ಸ್ತುತಿ
ದ್ದಾರೆ.

ಯಸ್ಯಾಃ ತೇ ಮಹಿಮಾನಮ್
ಆತ್ಮನ ಇವ, ತ್ವದ್ ವಲ್ಲಭೋಪಿ ಪ್ರಭುಃ
ನಾಲಂ ಮಾತುಮ್ ಇಯತ್ತಯಾ
ನಿರವಧಿಂ ನಿತ್ಯಾನುಕೂಲಂ ಸ್ವತಃ
ತಾಂ ತ್ವಾಂ ದಾಸ ಇತಿ,
ಪ್ರಪನ್ನ ಇತಿ ಚ ಸ್ತೋಷ್ಯಾಮ್ಯಹಂ ನಿರ್ಭಯಃ
ಲೋಕೈಕೇಶ್ವರಿ! ಲೋಕನಾಥದಯಿತೇ!
ದಾಂತೇ ದಯಾಂ ತೇ ವಿದರ್

ಸ್ವತಃ ಯಾವಾಗಲೂ ಅನುಕೂಲವಾಗಿಯೆ
ಇರುವ ನಿನ್ನ ಮಹಿಮೆಗೆ ಎಲ್ಲೆಕಟ್ಟು ಇಲ್ಲವೆ
ಇಲ್ಲ. ಆ ನಿನ್ನ ಮಹಿಮೆಯನ್ನು ಪ್ರಭುವಾದ ನಾರ
ಯಣನೂ - ಆತ ನಿನ್ನ ವಲ್ಲಭನೇ ಆಗಿದ್ದರು
- ತನ್ನ ಮಹಿಮೆಯನ್ನು ಹೇಗೋ ಹಾಗೆ, ಇಷ್ಟೆ
ಎಂದು ಅಳೆಯಲು ಸಮರ್ಥನಾಗಿಲ್ಲ. ಇಂತ
ನಿನ್ನನ್ನು, ಎಲೈ ಲೋಕೈಕೇಶ್ವರಿಯೇ! ಲೋ
ನಾಥಪ್ರಿಯಳೇ! ಮೃದುಸ್ವಭಾವವುಳ್ಳವಳೇ! ನಿ
ದಯೆಯನ್ನು ಮನಗಂಡವಾಗಿ, 'ನಾನು ನಿನ್ನ ದಾಸ
'ನಾನು ನಿನ್ನ ಶರಣಾಗತ' ಎಂಬುದಾಗಿ ಸ್ವಲ್ಪವ
ಭಯವಿಲ್ಲದವನಾಗಿ ಸ್ತೋತ್ರಮಾಡುವೆನು.

ವಿಶೇಷಾರ್ಥ :- ಒಂದು ಮಿಥುನವು ಶಾಸ್ತ್ರದ
ಪರಿಗಣಿತವಾದ ತತ್ವ, ಅದು ಸ್ತ್ರೀ ಪುಂರೂಪವ
ಗಿದೆ. ಆಜ್ಞಾಪನವು ಪುಂ ವ್ಯಕ್ತಿಗೆ ಸೇರಿದುದು. ಸ್ತ್ರ
ವ್ಯಕ್ತಿಯ ಕರ್ತವ್ಯ ಹೆದರಿಕೆಯನ್ನು ಹೋಗಲಾಡಿ
ಪ್ರಜೆಗಳಿಗೆ ವಿವೇಕವನ್ನು ದಾಸ್ಯಭಾವವನ್ನು, ಸ್ವರು
ಪವನ್ನು ತೋರಿಸಿಕೊಡುವುದು. ಈ ದಾಂಪ
ಕೃತ್ಯವು ಇಬ್ಬರಿಗೂ ಹಂಚಿಕೆಯಾದುದಲ್ಲ. ಚೇ
ನನು ಪ್ರಕೃತಿ ಸಂಸರ್ಗದಿಂದ ಮತಿಗೆಟ್ಟು, ಗ
ಗೆಟ್ಟು ಅಸತ್ಸಂಗವೇ ಆದರಣೀಯವೆಂಬ ನಿಲ
ವನ್ನು ಹೊಂದಿ ಘೋರ ಅನುಭವವನ್ನು ಪಡೆಯ
ತ್ತಾನೆ. ಪರಮಾತ್ಮನ ಔದಾಸೀನ್ಯದಿಂದ ಸ್ವರು

## ಪ್ರಕಟನೆ :

ತಿರುಮಲೆಗೆ ಹೋಗುವ ಘಾಟ್‌ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್‌ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

**ತಿ. ತಿ. ದೇ.**

ಪಕ್ಕೆ ಅನರ್ಹವಾದ ಸ್ವಾತಂತ್ರ್ಯಪಡೆದು, ತತ್ಫಲವಾಗಿ ಅಸದ್ವೃತ್ತಿಯಲ್ಲಿ ಮುಳುಗಿ ನಾನಾವಿಧವಾದ ಶಿಕ್ಷೆಗ ಳಿಗೆ ಒಳಪಡುತ್ತಾನೆ. ಈ ಅಂಶವನ್ನು ಶ್ರೀದೇವಿಯು ಪರಮಾತ್ಮನ ಗಮನಕ್ಕೆ ತಂದು, ಅಸಡ್ಡೆಯ ಫಲವಾದ ಅನರ್ಥವನ್ನು ತಪ್ಪಿಸಲು ಸಂಬಂಧವು ಮುಖ್ಯಕಾರಣ, ಆತ್ಮವೈರಾಗ್ಯವಲ್ಲ. ತನ್ನ ವಶದಲ್ಲೇ ಇರುವ ಚೇತನವರ್ಗವು ತಪ್ಪುಮಾರ್ಗಕ್ಕೆ ಹೋಗಲು ಅವಕಾಶ ನೀಡಿದುದು ಭಗವಂತನ ಗುಣಪೂರ್ತಿಗೆ ಲೋಪ ಏರ್ಪಡುತ್ತದೆ. ಅವನ ಕರುಣೆಗೆ ಅವಕಾಶವೇ ಇಲ್ಲ. ಇಲ್ಲಿ ಭಗವಂತನ ಅಸಡ್ಡೆಯಿಂದ ಅನರ್ಥ. ಪರದೋಷ ನಿವಾರಣೆ ನಿಜವಾದ ನಿವಾರಣೆ. ಈ ದುಃಖ ಅಥವಾ ದೋಷಕ್ಕೆ ಕಾರಣ ಯಾರೋ ಅವನು ನಿಂದೆಗೆ ತುತ್ತಾಗಬೇಕು. ತನ್ನಿಂದ ಈ ದುಃಖವೇರ್ಪಟ್ಟ ಕಾರಣ ಮೂಲ ಅಪರಾಧ ತನ್ನದು ಎಂಬ ಭಾವನೆ ದಯಾಮಯನಲ್ಲಿ ಹುಟ್ಟಬೇಕು.

ರಾಮಾಯಣದಲ್ಲಿ ಇದು ಸುವ್ಯಕ್ತವಾಗಿದೆ. ರಾಮಚಂದ್ರನು ತನ್ನ ಪ್ರಜೆಗಳಲ್ಲಿ ದುಃಖವೇರ್ಪಟ್ಟುದನ್ನು ಕೇಳಿದ ಕೂಡಲೇ ತಾನು ಬಹಳ ಖಿನ್ನನಾಗುತ್ತಾನೆ. ಕಾರಣ, ತನ್ನ ಕರ್ತವ್ಯದಲ್ಲಿ ಅಸಡ್ಡೆ. ಇದೇ ಪರದುಃಖ ಅಸಹಿಷ್ಣುತ್ವ. ಒಬ್ಬ ಗಣ್ಯವ್ಯಕ್ತಿಗೆ ಅತಿನಿಹೀತ ಸಂತಾನ ಏರ್ಪಟ್ಟರೆ ಅದು ಸಂತಾನ ದೋಷವಲ್ಲ. ತಜ್ಜನಕನಾದ ಇವನ ಧರ್ಮನಿಷ್ಠೆಯಲ್ಲಿ ಏರ್ಪಟ್ಟ ದೋಷ. ತನ್ನ ಕಾರ್ಯವನ್ನು ಶಿಶುವಿನ ಮೇಲೆ ಹೊರಿಸಿ ಅದನ್ನು ಶಿಕ್ಷೆಗೆ ಗುರಿಪಡಿಸುವುದು ಅವಿವೇಕ. ಅನಿಷ್ಟೆಯಿಂದ ಅಕ್ರಮ. ಈ ದೃಷ್ಟಿಯಿಂದ ಪತ್ನಿ ಸಹವಾಸ ಅವಶ್ಯಕ. ನಡತೆಯಲ್ಲಿ ನ್ಯೂನತೆ ಉಂಟಾದರೆ ಭಗವಂತನು ಒಂದು ಉಪಾಯವನ್ನು ಕಂಡುಹಿಡಿದ. ಅದು ಲೀಲಾ. ಇಚ್ಛಾಪೂರ್ವಕವಾಗಿ ಶಿಶುಗಳನ್ನು ತೊಂದರೆಗೆ ಸಿಕ್ಕಿಹಾಕಿಸಿ ಆಪತ್ತು ಒದಗಿದಾಗ ರಕ್ಷಿಸುವ ಕರ್ತವ್ಯ ಮಾಡುತ್ತಾನೆ. ನಡತೆಯ ನಾಶಕ್ಕೆ ಚೇತನನಿಗೆ ಅಧಿಕಾರ; ಅದರಿಂದ ದುಷ್ಪರಿಣಾಮಕ್ಕೆ ದಾರಿ, ಶಿಕ್ಷೆ ಚೇತನನ ಉದ್ಧಾರಕ್ಕೆ ಸಂಬಂಧವೇ ಕಾರಣ. ಆಗುಹೋಗುಗಳು ಈಶ್ವರ ಸಂಕಲ್ಪ. ಈ ಭಾವನೆಯು ಶ್ರೀದೇವಿಯ ಸಂಪರ್ಕದ ಫಲ. ಜೀವಾತ್ಮನು ಕಿಂಕರ. ಕೈಂಕರ್ಯವು ಈಶೇಶಿತವ್ಯ ಸಂಬಂಧದ ಪ್ರಭಾವ. ಅಂದ ಮೇಲೆ ಭಗವಂತನಿಗೆ ಜೀವಾತ್ಮನು ಸರ್ವದಾ ಒಡನಾಡಿಯಾದ ಸೇವಕನಾಗುತ್ತಾನೆ. ಚೇತನನಲ್ಲಿರುವ ಅಹಂ ಈಶ್ವರನ ಅಹಂ ಶಬ್ದಕ್ಕೆ ಶರೀರದಂತೆ ಅಡಿಯಾಳಾಗುತ್ತದೆ.

ಹಿಂದಿನ ಶ್ಲೋಕದಲ್ಲಿ ಹೇಳಿರುವ ಮಹಿಮೆಯನ್ನು ತನ್ನ ಮಹಿಮೆಯಂತೆ, ಎಲ್ಲದಕ್ಕು ಯಜಮಾನನಾಗಿದ್ದರೂ ಎಲ್ಲೆಯನ್ನು ಅರಿಯಲಾರ. ಈ

ಯತ್ಪಾದಾಮ್ಭೋರುಹಧ್ಯಾನ ವಿಧ್ವಸ್ತಾಶೇಷಕಲ್ಮಷಃ
ವಸ್ತುತಾಮುಪಯಾತೋಽಹಂ ಯಾಮುನೇಯಂ ನಮಾಮಿ ತಮ್

---

ಕಾನ್ತಸ್ತೇ ಪುರುಷೋತ್ತಮಃ ಫಣಿಪತಿಶ್ಶಯ್ಯಾಽಽಸನಂ ವಾಹನಂ
ವೇದಾತ್ಮಾ ವಿಹಗೇಶ್ವರೋ ಯವನಿಕಾ ಮಾಯಾ ಜಗನ್ಮೋಹಿನೀ
ಬ್ರಹ್ಮೇಶಾದಿ ಸುರವ್ರಜಃ ಸದಯಿತಃ ತ್ವದ್ದಾಸ ದಾಸೀಗಣಃ
ಶ್ರೀರಿತ್ಯೇವ ಚ ನಾಮ ತೇ ಭಗವತಿ! ಬ್ರೂಮಃ ಕಥಂ ತ್ವಾಂ ವಯಮ್

ಯಸ್ಯಾಸ್ತೇ ಮಹಿಮಾನಮಾತ್ಮನ ಇವ ತ್ವದ್ವಲ್ಲಭೋಽಪಿ ಪ್ರಭುಃ
ನಾಲಂ ಮಾತುಮಿಯತ್ತಯಾ ನಿರವಧಿಂ ನಿತ್ಯಾನುಕೂಲಂ ಸ್ವತಃ
ತಾಂ ತ್ವಾಂ ದಾಸ ಇತಿ ಪ್ರಪನ್ನ ಇತಿ ಚ ಸ್ತೋಷ್ಯಾಮ್ಯಹಂ ನಿರ್ಭಯಃ
ಲೋಕೈಕೇಶ್ವರಿ! ಲೋಕನಾಥದಯಿತೇ! ದಾನ್ತೇ! ದಯಾಂತೇ ವಿದನ್

ಈಷತ್ತ್ವತ್ಕರುಣಾನಿರೀಕ್ಷಣ ಸುಧಾಸನ್ಧುಕ್ಷಣಾ ದ್ರಕ್ಷ್ಯತೇ
ನಷ್ಟಂ ಪ್ರಾಕ್ತದಲಾಭತಸ್ತ್ರಿಭುವನಂ ಸಂಪ್ರತ್ಯನನ್ತೋದಯಮ್
ಶ್ರೇಯೋ ನಹ್ಯರವಿನ್ದ ಲೋಚನಮನಃ ಕಾನ್ತಾಪ್ರಸಾದಾದೃತೇ
ಸಂಸೃತ್ಯಕ್ಷರವೈಷ್ಣವಾಧ್ವಸು ನೃಣಾಂ ಸಮ್ಭಾವ್ಯತೇ ಕರ್ಹಿಚಿತ್

ಶಾನ್ತಾನಂತಮಹಾವಿಭೂತಿ ಪರಮಂ ಯದ್ಬ್ರಹ್ಮರೂಪಂ ಹರೇಃ
ಮೂರ್ತಂ ಬ್ರಹ್ಮತತೋಽಪಿ ಯತ್ಪ್ರಿಯತರಂರೂಪಂ ಯದತ್ಯದ್ಭುತಮ್
ಯಾನ್ಯನ್ಯಾನಿ ಯಥಾಸುಖಂ ವಿಹರತೋ ರೂಪಾಣಿ ಸರ್ವಾಣಿ ತಾ-
ನ್ಯಾಹುಃ ಸ್ವೈರನುರೂಪರೂಪವಿಭವೈರ್ಗಾಢೋಪಗೂಢಾನಿತೇ

---

ಯತ್ಪಾದಾಮ್ಭೋರುಹಧ್ಯಾನ ವಿಧ್ವಸ್ತಾಶೇಷಕಲ್ಮಷಃ
ವಸ್ತುತಾಮುಪಯಾತೋಽಹಂ ಯಾಮುನೇಯಂ ನಮಾಮಿ ತಮ್

---

ಮಹಿಮೆಯು ನಿತ್ಯವೂ ಅನುಕೂಲಕರವಾಗಿಯೇ ಇರುತ್ತದೆ. ಅಂತಹ ಹಿರಿಮೆಯುಳ್ಳ ಶ್ರೀದೇವಿಯು ತನ್ನನ್ನು ಅವಳ ಸೇವೆಗೆ ಒಳಪಟ್ಟವನು - ದಾಸ - ಎಂದು ನಡೆಸಿಕೊಳ್ಳುವ ಸರ್ವಭಾರವನ್ನು ಅವಳ ಮೇಲೆ ಹಾಕಿ ಆಚಾರ್ಯರು ಮೊರೆಯಿಡುತ್ತಾರೆ.

ಇದರಲ್ಲಿ ಹೆದರಿಕೆ ಇಲ್ಲ. ಕಾರಣ ಅವಳು ಲೋಕೈಕೇಶ್ವರಿ ಅಂದರೆ ಚೇತನವರ್ಗದಲ್ಲಿ ಒಬ್ಬಳೇ ಒಬ್ಬಳು ಈ ಸಾಮರ್ಥ್ಯವನ್ನು ಪಡೆದವಳು. ಕಾರಣ, ಲೋಕನಾಥನ ಮೆಚ್ಚಿಗೆಗೆ ಪಾತ್ರಳಾಗಿ ಪ್ರಿಯತಮಳಾದ ವ್ಯಕ್ತಿ ಆಗಿದ್ದಾಳೆ. ಅವಳು ಹಿಂಸೆಗೆ ಒಳಪಡಿಸದ ಆತ್ಮ ಸಂಯಮವುಳ್ಳವಳು. ಇಂತಹ ಅವಳ ದಯೆಯನ್ನು ಚೆನ್ನಾಗಿ ಅರಿತಿರುವುದರಿಂದ ತತ್ಫಲವಾಗಿ ಎದೆಗುಂದದೆ - ಅವಳನ್ನು ಬಿಟ್ಟು ಈಶ್ವರನಲ್ಲಿ ಮೊರೆಯಿಡಲಾರರು. ಏಕೆಂದರೆ ಅವನಲ್ಲಿ ಈಶ್ವರತ್ವ ಮಾತ್ರ ಬಳಕೆಗೆ ಬಂದರೆ ಯಾರಿಗೂ ಉಳಿಗಾಲವಿಲ್ಲ. ದಯಾಧೀನ ಸರ್ವೇಶ್ವರತ್ವವು ಈಶ್ವರನ ಸ್ವರೂಪ. ಆದ್ದರಿಂದ ಆಚಾರ್ಯರು ಶ್ರೀದೇವಿಯ ಬಳಿ ಬಂದಿದ್ದಾರೆ.

ಈಷತ್ ತ್ವತ್ಕರುಣಾ ನಿರೀಕ್ಷಣ
ಸುಧಾ ಸಂಧುಕ್ಷಣಾತ್ ರಕ್ಷ್ಯತೇ
ನಷ್ಟಂ ಪ್ರಾಕ್ ತದಲಾಭತಃ
ತ್ರಿಭುವನಂ ಸಂಪ್ರತಿ ಅನನ್ತೋದಯಂ
ಶ್ರೇಯೋ ನ ಹಿ ಅರವಿಂದಲೋಚನ
ಮನಃಕಾಂತಾ ಪ್ರಸಾದಾತ್ ಋತೇ
ಸಂಸೃತಿ ಅಕ್ಷರ ವೈಷ್ಣವಾಧ್ವಸು
ನೃಣಾಂ ಸಂಭಾವ್ಯತೇ ಕರ್ಹಿಚಿತ್

ತತ್ಕ್ಷಣ ಫಲಕೊಡುವ ನಿನ್ನ ಕೃಪಾಕಟಾಕ್ಷವೀಕ್ಷಣವೆಂಬ ಅಮೃತದ ಸ್ವಲ್ಪ ಮಾತ್ರ ಹೊರಹೊಮ್ಮುವಿಕೆಯಿಂದಲೇ ಮೂರು ಲೋಕಗಳೂ, ಅದಕ್ಕೆ ಮುಂಚೆ ಅದರ ಲಾಭವಿಲ್ಲದೆ ನಷ್ಟಹೊಂದಿದ್ದು,

ಈಗ ಅದನ್ನು ಪಡೆದು ಅನಂತವಾದ ಐಶ್ವರ್ಯಗಳ ಉದಯವುಳ್ಳವುಗಳಾಗಿ ರಕ್ಷಿಸಲ್ಪಡುತ್ತಿವೆ. ಅರವಿಂದಲೋಚನನಾದ ನಾರಾಯಣನ ಮನೋವಲ್ಲಭೆಯಾದ ನಿನ್ನ ಅನುಗ್ರಹವಿಲ್ಲದಿದ್ದರೆ, ಸಂಸಾರಮಾರ್ಗವಲ್ಲಾಗಲೀ, ಕೈವಲ್ಯಾನುಭವವಲ್ಲಾಗಲೀ, ಪರಮ ಪದ ಪ್ರಾಪ್ತಿಯಲ್ಲಾಗಲೀ, ಎಲ್ಲೂ, ಜನರಿಗೆ ಶ್ರೇಯಸ್ಸು ಉಂಟಾಗುವುದೇ ಇಲ್ಲವಲ್ಲವೇ!

ವಿಶೇಷಾರ್ಥ :- ಎಲ್ಲವೂ ಈಶ್ವರಾಧೀನವೆಂದು ತಿಳಿದು ಬಂದರೂ ತತ್ ಜ್ಞಾನಾನುಗುಣವಾಗಿ ತಮ್ಮ ಸ್ವರೂಪ ನಡತೆಯನ್ನು ಉಳಿಸಿಕೊಳ್ಳುವರು ಅತಿ ವಿರಳ. ಆಳ್ವಾರರಲ್ಲಿ ಇಬ್ಬರು ಇಂಥ ಜ್ಞಾನವನ್ನು ಪಡೆಯದಿರಲು, ಈಶ್ವರನ ಕಣ್ಣಿಗೆ ಬೀಳದಿರುವ ಪಾಪಿ ತಾನು ಎಂದು ನಿಂದಿಸಿಕೊಂಡರೆ, ಮತ್ತೊಬ್ಬರು ತಾವು ಪಾಪವನ್ನೇ ಎಸಗಿದರೂ ಅದರಿಂದ ಪಾರುಮಾಡದಿರುವ ಕಾರಣ, ಈಶ್ವರನು ಖಂಡಿತವಾಗಿಯೂ ಸರ್ವೇಶ್ವರನಲ್ಲ ಎಂದು ದೋಷಾರೋಪಣೆ ಮಾಡಿ, ತನಗೆ ಮೋಕ್ಷ ಸಿದ್ಧವಾಗದಿರಲು ಕಾರಣ ಈಶ್ವರನಲ್ಲಿ ಜ್ಞಾನ, ಶಕ್ತಿ, ಸಾಮರ್ಥ್ಯಪೂರ್ಣವಾಗಿಲ್ಲ. ಆದ್ದರಿಂದ ಅವನು ದೇವತಾಂತರ ವರ್ಗಕ್ಕೆ ಸೇರಬೇಕಾದವನೆಂದು ಹೇಳಿದ್ದಾರೆ. ಇದು ನಿರೀಕ್ಷ್ಯರವಾದ ಬೆದರಿಕೆ. ಆದ್ದರಿಂದ ಚೇತನನಿಗೆ ಮೋಕ್ಷ ಕೊಡದೆ ಹೋದರೆ ಈಶ್ವರ ಶಬ್ದಕ್ಕೆ ಅಧಿಕಾರವಿಲ್ಲ. ಇವೆರಡು ಭಾವನೆಗಳು ಪರಾಂಕುಶ ಮತ್ತು ಪರಕಾಲರ ಮೂಲಕ ತಿಳಿದುಬರುತ್ತವೆ.

ಈಶ್ವರನು ಸರ್ವೇಶ್ವರನಾದಂತೆ ಅವನ ಪತ್ನಿಯಾದ ಶ್ರೀದೇವಿಯು ಸರ್ವೇಶ್ವರಿ. ಈಗ ಇದು ಕಾಂತಾಸ್ತೋತ್ರವೇ ವಿನಾ ಕಾಂತಸ್ತೋತ್ರವಲ್ಲ. ಈಶ್ವರನು ಒಲಿದಿರುವ ವ್ಯಕ್ತಿಯ ಮಾತಿಗೆ ಅಗತ್ಯವಾಗಿ ಗೌರವ ಸಲ್ಲಿಸಬೇಕಾದ್ದು ಅವಳಿಗೂ ಸ್ವಾಮಿಯಾದ ಈಶ್ವರನ ಕರ್ತವ್ಯ. ಅವರು ಧರ್ಮದೇವತೆ ಎಂಬ ಭಾವನೆಯನ್ನು ಸೂಚಿಸಲು ಪತಿಪತ್ನಿಯಾಗಿರುವುದು. ದಂಪತೀ ಜಗದಾಂಪತಿ ಎಂದಿದ್ದಾರೆ ವೇದಾಂತದೇಶಿಕರು. ಶ್ರೀದೇವಿಯು ಪರಮಾತ್ಮನೊಡನೆ ಸೇರಲು ಯಾವ ವ್ರತವನ್ನೂ ಮಾಡಲಿಲ್ಲ. ಈಶ್ವರನನ್ನು ಕಂಡಕೂಡಲೇ ಅವನಲ್ಲಿ ಉದ್ಭವಿಸಿದ ಸಂಗಮೇಚ್ಛೆ ಅವಳ ಪಾಲಿನದಲ್ಲ. ಆಕರ್ಷಣೆ, ಅಂಗೀಕಾರ, ಅದರ ನಿತ್ಯತೆ ಎಲ್ಲವೂ ಭಗವಂತನ ಪಾಲಾಯಿತು. ಅವಳು ಚೇತನ ಮತ್ತು ಈಶ್ವರನ ಸಂಬಂಧವನ್ನು ಅರಿತವಳು.

ಸಕಲ ಜಗತ್ತು ಶ್ರೀದೇವಿಯ ಕರುಣೆ. ಜನರ ದುಃಖದರ್ಶನ ಸ್ವನಿಷ್ಠ ಸ್ಮರಣೆ. ಅದೇ ಕಾರುಣ್ಯ ಈ ಭಾವನೆಯಿದ ಯಾರನ್ನು ಕಾಣುತ್ತಾಳೆಯೋ, ಅವರ ಪ್ರೋಕ್ಷಣೆಯಿಂದ ಜಗತ್ತಿನ ಪರಿಪಾಲನೆ, ಇದೇ ಲಕ್ಷ್ಮೀಕಟಾಕ್ಷ, ಇದು ಅತಿಹಿತಕರ, ಆನಂದಕರ. ಈಕೆಯ ಕೈವಾಡದಿಂದ ಶ್ರೀಮನ್ನಾರಾಯಣನ ವ್ಯಾಪಾರವೆಲ್ಲ ಎಲ್ಲೆ ಮೀರಿದ ಆನಂದಮಯ. ಚೇತನನಿಗೆ ಉಳಿದಿರುವುದು ಕೈಂಕರ್ಯ. ಇದರಿಂದ ಪರಕಾರುಣ್ಯ ಲಕ್ಷ್ಮೀದೇವಿಯ ಸಾಂಗತ್ಯಫಲ. ನಾರಾಯಣನು ಭಗವಂತನಾಗುತ್ತಾನೆ. ಶ್ರೀದೇವಿಯು ಭಗವತಿ. ಅವಳ ಅನುಗ್ರಹವಿಲ್ಲದೆ ಉಳಿಗಾಲವಿಲ್ಲ. ಲಕ್ಷ್ಮಿಯನ್ನು ಆಶ್ರಯಿಸಿದರೆ ಸಂಬಂಧಮುಂದಿಟ್ಟು ನೆರವು ನೀಡುತ್ತಾಳೆ. ಮೋಕ್ಷವು ಲಕ್ಷ್ಮೀಪೂರ್ವಕವಾದರೆ ಸದ್ಯಃ ಈಗಲೇ ಇಲ್ಲೇ ಏರ್ಪಡಬಹುದು. ಅಂದರೆ ಅನುಭವ ಬದಲಾಯಿಸಬಹುದು.

ಶಾಂತಾನಂತ ಮಹಾವಿಭೂತಿ
ಪರಮಂ ಯದ್ ಬ್ರಹ್ಮರೂಪಂ ಹರೇಃ
ಮೂರ್ತಂ ಬ್ರಹ್ಮತತೋಪಿ ತತ್
ಪ್ರಿಯತರಂ ರೂಪಂ ಯದ್ ಅತ್ಯದ್ಭುತಮ್
ಯಾನಿ ಅನ್ಯಾನಿ ಯಥಾ ಸುಖಂ
ವಿಹರತಃ ರೂಪಾಣಿ ಸರ್ವಾಣಿ ತಾನಿ,
ಆಹುಃ ಸ್ವೈಃ ಅನುರೂಪ
ರೂಪ ವಿಭವೈಃ ಗಾಢೋಪಗೂಢಾನ್ವಿತೇ

ಶ್ರೀಹರಿಯ 'ಬ್ರಹ್ಮ' ರೂಪವು ಶಾಂತವೂ, ಅನಂತವೂ, ಮಹಾವಿಭೂತಿಯುಳ್ಳದ್ದೂ, ಉತ್ಕೃಷ್ಟವೂ ಆದುದು. ಆದರೆ ದಿವ್ಯಾವಯವಗಳಿಂದ ಕೂಡಿ ಅತ್ಯದ್ಭುತವಾಗಿರುವ ಮೂರ್ತರೂಪವೇ ಆ ಶ್ರೀಹರಿಗೆ ಹೆಚ್ಚುಪ್ರಿಯವಾದುದು. ಈ ರೂಪಗಳೂ ಮತ್ತು ಆತ ಯಥಾಸುಖವಾಗಿ ವಿಹರಿಸುವ ಇತರ ಬೇರೆ ಬೇರೆ ಅವತಾರ ರೂಪಗಳೂ ಎಲ್ಲವೂ, ಆತನಿಗೆ ಅನುರೂಪವಾದ ನಿನ್ನ ರೂಪ ಮತ್ತು ವಿಭವಗಳಿಂದ ದೃಢವಾಗಿ ಕೂಡಿಕೊಂಡಿರುವುವು ಎಂದು ಬಲ್ಲವರು ಹೇಳುತ್ತಾರೆ.

ವಿಶೇಷಾರ್ಥ :-- ಆನಂದಕ್ಕೆ ಅಪೇಕ್ಷಿತ ಸಾಮಗ್ರಿ ಐಶ್ವರ್ಯ. ಅದು ಅತ್ಯುತ್ತಮವಾದ ಶಾಶ್ವತವಾದ ಅವಸ್ಥೆ. ಇದರಲ್ಲಿ ಕಳವಳಕ್ಕೆ ಕಾರಣವಿಲ್ಲ ಮತ್ತು ಅನುಭವಕ್ಕೆ ಮಿತಿ ಇಲ್ಲ. ಇದು ಮಹಾವಿಭೂತಿ, ಇದು ಹರಿಯ ಬೃಹತ್ವದ ಸ್ವರೂಪ. ಇದು ಪರಮಪದ. ಇದೇ ಪರಬ್ರಹ್ಮನ ಮುಗಿಲು ಮುಟ್ಟಿದ ಸ್ವರೂಪ, ಸ್ವಭಾವ. ಆ ಹರಿಯ ಇತರರಿಗೆ ಗೋಚರವಾಗಬಲ್ಲ ರೂಪವು ಹಿಂದೆ ಕಂಡದ್ದಕ್ಕಿಂತ ಸಂತೋಷ ಉಂಟುಮಾಡಬಲ್ಲುದು. ಈ ರೂಪಾವಸ್ಥೆಯು ಅದ್ಭುತವಾದುದು. ಅವನು ತನ್ನ ಇಚ್ಛಾನುಸಾರ ವಿಹರಿಸಲು ಅವತಾರಗಳ ಮೂಲಕ ರೂಪಾಂತರ ತಾಳುತ್ತಾನೆ. ಅವು ಸನ್ನಿವೇಶಕ್ಕೆ ಅನುಗುಣವಾದ ವೇಷಗಳು. ಅನೇಕ ವಿಧವಾದ ಸ್ಥಾವರ ಜಂಗಮರೂಪದಲ್ಲಿ ಈಶ್ವರನು ಪ್ರಕಟಿಸುವ ಬಗೆ ಇದು. ಎಲ್ಲವೂ ಲಕ್ಷ್ಮೀನಾರಾಯಣರ ಸಂಬಂಧ
ವನ್ನೇ ತೋರಿಸುತ್ತವೆ. ವಿಷ್ಣುವಿನ ಅವತಾರರೂ
ಹೊಂದಿಕೊಳ್ಳಬಲ್ಲ ವೇಷಗಳನ್ನು ತಾಳಿ ತನ್ನ
ಅವನ ಮಹಿಷಿಯ, ಅವನನ್ನು ಬಿಡದೆ ಅಂಟಿ
ಡಿರುವ ಸ್ವಭಾವವನ್ನು, ಕಾಂತ ಕಾಂತೆಯರ ಸ
ತ್ವವನ್ನು ತೋರಿಸುತ್ತದೆ. ಶ್ರೀದೇವಿ ಇಲ್ಲದೆ ಭ
ತನಿಲ್ಲ. ಭಗವಂತನಿಲ್ಲದೆ ಶ್ರೀದೇವಿ ಇಲ್ಲ. ಜ
ಸ್ವರೂಪತಃ ಪರಮಾತ್ಮನಲ್ಲ. ಅವನಿಲ್ಲದೆ
ಉಳಿಯಲಾರದು. ಕಾರಣ ಜಗತ್ತಿಗೂ ಪರ
ತ್ಮನಿಗೂ ಏರ್ಪಟ್ಟಿರುವ ಸಂಬಂಧ. ಭಗವಂ
ಜೀವರಾಶಿಯ ನಷ್ಟ ಪಿತೃಕನಲ್ಲ. ಅವಳು ಇ
ಬಯಸಲಾರಳು. ಪರಸ್ಪರಕಾಂತತೆ ಏರ್ಪಟ್ಟಿ
ದಕ್ಕೆ ಕಾಂತಾಸ್ತೋತ್ರವೆಂಬ ಹೆಸರು ಸಮುಚಿ
ಗಿದೆ. ಈ ಸಂಗವು ಕಾಂತತೆಯನ್ನು ಎಂದಿ
ಕುಂದಿಗೆ ಒಳಪಡಿಸುವುದಿಲ್ಲ. ಈ ಶ್ಲೋಕದಲ್ಲಿ
ನಾರಾಯಣರ ನಿತ್ಯ ಸಹಯೋಗ, ಸಂಬಂಧ
ಯಾವ ಸನ್ನಿವೇಶದಲ್ಲೂ ಏಕರೂಪವಾಗಿರು
ಎಂಬ ತತ್ವಾರ್ಥವು ತೋರುತ್ತದೆ.

ಆಕಾರತ್ರಯ ಸಂಪನ್ನಾಮ್
ಅರವಿಂದ ನಿವಾಸಿನೀಮ್
ಅಶೇಷ ಜಗತ್ ಈಶಿತ್ರೀಂ
ವನ್ದೇ ವರದವಲ್ಲಭಾಮ್

ಉಪಾಯತ್ವ, ಉಪೇಯತ್ವ, ಪುರುಷಕಾ
ಎಂಬ ಮೂರು ಆಕಾರಗಳಿಂದ ಕೂಡಿದವ
ಅರವಿಂದ ನಿವಾಸಿನಿಯೂ, ವರಪ್ರದನಾದ ವಿ
ವಿನ ವಲ್ಲಭೆಯೂ ಆದ ಅಶೇಷ ಜಗತ್ ಸ್ವ
ನಿಯೂ ಆದ ಲಕ್ಷ್ಮಿಗೆ ನಮಸ್ಕರಿಸುತ್ತೇನೆ.

ಚತುಃಶ್ಲೋಕೀ ಎಂಬ ಈ ಸ್ತೋತ್ರದಲ್ಲಿ ಸಾ
ಶ್ಲೋಕಗಳಿವೆ. ಆದರೆ ಇದನ್ನು ಪಠಿಸುವಾಗ ಲ
ಸ್ತುತಿ ರೂಪವಾದ ರಾಮಾನುಜಾಚಾರ್ಯರ
ಣಾಗತಿ ಗದ್ಯದ ಒಂದು ಭಾಗ, ಪರಾಶರ ಭ
ಗುಣರತ್ನಕೋಶದ ಒಂದು ಶ್ಲೋಕ ಮತ್ತು ವೇ
ತದೇಶಿಕರ ಶ್ರೀಸ್ತುತಿಯಿಂದ ಒಂದು ಶ್ಲೋಕವ
ಪಠಿಸುವುದು ರೂಢಿ. ಅವು ಹೀಗಿವೆ-

ಭಗವನ್ನಾರಾಯಣ ಅಭಿಮತ ಅನುರು
ಸ್ವರೂಪ ರೂಪ ಗುಣ ವಿಭವ ಐಶ್ವರ್ಯ ಶೀಲ
ಅನವಧಿಕಾತಿಶಯ ಅಸಂಖ್ಯೇಯ ಕಲ್ಯಾಣ ಗ
ಗಣಾಂ, ಪದ್ಮವನ ಆಲಯಾಂ, ಭಗವತೀಂ, ಶ್ರಿ
ದೇವೀಂ, ನಿತ್ಯ ಅನಪಾಯಿನೀಂ, ನಿರವದ್ಯಾಂ, ದೆ
ದೇವ ದಿವ್ಯಮಹಿಷೀಂ, ಅಖಿಲ ಜಗನ್ಮಾತ
ಅಸ್ಮತ್ ಮಾತರಮ್, ಅಶರಣ್ಯ ಶರಣ್ಯಾ
ಅನನ್ಯ ಶರಣಃ ಶರಣಮ್ ಅಹಂ ಪ್ರಪದ್ಯೇ--

ಭಗವಂತನಾದ ನಾರಾಯಣನಿಗೆ ಇಷ್ಟ
ಒಪ್ಪತಕ್ಕವೂ ಆದ ಸ್ವರೂಪ, ರೂಪ, ಗುಣ, ವಿಭ

ಐಶ್ವರ್ಯ, ಶೀಲ ಮೊದಲಾದ ಕೊನೆಯಿಲ್ಲದ ಅತಿಶಯವುಳ್ಳ ಲೆಕ್ಕಮಾಡಲಾಗದ ಕಲ್ಯಾಣಗುಣಗಳ ಸಮೂಹವುಳ್ಳ ನೀನು ಭಗವತಿ ಶ್ರೀದೇವಿ; ತಾವರೆ ವನವನ್ನೇ ಮನೆಮಾಡಿಕೊಂಡಿರುವವಳು; ವಿಷ್ಣುವನ್ನೆಂದೂ ಬಿಟ್ಟಿರದವಳು; ಸ್ವಲ್ಪವೂ ದೋಷವಿಲ್ಲದವಳು; ದೇವದೇವ ನಾರಾಯಣನ ದಿವ್ಯಮಹಿಷಿ; ಜಗತ್ತೆಲ್ಲಕ್ಕೂ ತಾಯಿ; ನನ್ನ ತಾಯಿ; ರಕ್ಷಕರಿಲ್ಲದವರಿಗೆ ರಕ್ಷಕಳು; -- ಇಂತಹ ನಿನ್ನನ್ನು ಬೇರೆ ರಕ್ಷಕರಿಲ್ಲದ ನಾನು ಶರಣುಹೊಂದುತ್ತೇನೆ. (ಶರಣಾಗತಿ ಗದ್ಯ)

ಉಲ್ಲಾಸ ಪಲ್ಲವಿತ
ಪಾಲಿತ ಸಪ್ತಲೋಕೀ
ನಿರ್ವಾಹ ಕೋರಕಿತ
ನೇಮಕಟಾಕ್ಷಲೀಲಾಂ
ಶ್ರೀರಂಗ ಹರ್ಮ್ಯತಲ
ಮಂಗಳ ದೀಪರೇಖಾಂ
ಶ್ರೀರಂಗರಾಜ ಮಹಿಷೀಂ
ಶ್ರೀಯಮ್ ಆಶ್ರಯಾಮಃ

(ಗುಣರತ್ನಕೋಶ)

ಸಪ್ತಲೋಕಗಳ ಉತ್ಪತ್ತಿಯೆಂಬ ಚಿಗುರನ್ನು ಹೊಂದಿ, ಪಾಲಿತವಾದ ಆ ಲೋಕಗಳ ನಿರ್ವಾಹಗಳೆಂಬ ಮೊಗ್ಗುಗಳಿಂದ ತುಂಬಿ, ಅರಿಗಣ್ಣೋಟದ ಲೀಲೆಯಿಂದ ಕೂಡಿದ ಮತ್ತು ಶ್ರೀರಂಗ ಕ್ಷೇತ್ರವೆಂಬ ಭವನತಲಕ್ಕೆ ಮಂಗಳಕರವಾದ ದೀಪರೇಖೆಯಾಗಿರುವ, ಶ್ರೀರಂಗನಾಥನ ಪಟ್ಟಮಹಿಷಿಯಾದ 'ಶ್ರೀ' ದೇವಿಯನ್ನು ಆಶ್ರಯಿಸುತ್ತೇನೆ.

ಕಲ್ಯಾಣಾನಾಮ್ ಅವಿಕಲನಿಧಿಃ
ಕಾಽಪಿ ಕಾರುಣ್ಯಸೀಮಾ
ನಿತ್ಯಾಮೋದಾ ನಿಗಮವಚಸಾಂ
ಮೌಳಿ ಮಂದಾರಮಾಲಾ
ಸಂಪತ್ ದಿವ್ಯಾ ಮಧು ವಿಜಯಿನಃ
ಸನ್ನಿಧತ್ತಾಂ ಸದಾಮೇ
ಸೈಷಾ ದೇವೀ ಸಕಲ ಭುವನ
ಪ್ರಾರ್ಥನಾ ಕಾಮಧೇನುಃ

(ಶ್ರೀಸ್ತುತಿ)

ಶ್ರೀದೇವಿಯು ವಿನಾಶರಹಿತವಾದ ನಿಧಿ; ಕಾರುಣ್ಯಕ್ಕೆ ಅನಿರ್ವಚನೀಯವಾದ ಎಲ್ಲೆ; ಸದಾ ಆನಂದಸ್ವರೂಪಳು; ವೇದವಾಕ್ಯಗಳ ಶಿರಸ್ಸಾದ ಉಪನಿಷತ್ತುಗಳಿಗೆ ಮಂದಾರ ಪುಷ್ಪಗಳ ಮಾಲೆ; ಮಧುಸೂದನನ ಲೋಕೋತ್ತರವಾದ ಸಂಪತ್ತು; ಸಮಸ್ತ ಜನರ ಪ್ರಾರ್ಥನೆಗೂ ಕಾಮಧೇನು; ಇಂತಹ ಶ್ರೀರಂಗನಾಯಕಿದೇವಿಯು ಸದಾ ನನ್ನಲ್ಲಿ ಸಾನ್ನಿಧ್ಯವಿಡಲಿ.

(ವಿವಿಧ ಮೂಲಗಳಿಂದ)

(ಫೆಬ್ರುವರಿ 1995 ಸಪ್ತಗಿರಿ)

# ಸಿದ್ಧಿತ್ರಯ

ಸಿದ್ಧಿತ್ರಯವೆಂಬುದು ಮೂರು ಸ್ವತಂತ್ರ ಕೃತಿಗಳು ಎನ್ನಬರುತ್ತದೆ. ಆತ್ಮಸಿದ್ಧಿ, ಈಶ್ವರಸಿದ್ಧಿ, ಸಂವಿತ್ ಸಿದ್ಧಿಗಳು. ಮೂರೂ ಕೃತಿಗಳೂ ಅಪೂರ್ಣವಾಗಿಯೇ ಉಪಲಬ್ಧವಾಗಿವೆಯಾದರೂ, ಕಡೆಯದು ತುಸು ಹೆಚ್ಚಿನ ಪ್ರಮಾಣದಲ್ಲಿ ತ್ರುಟಿತವಾಗಿದೆ.

ಆತ್ಮಸಿದ್ಧಿ : ನಲವತ್ತೂರು ಶ್ಲೋಕಗಳನ್ನು ಒಳಗೊಂಡಿರುವ ಗದ್ಯಕೃತಿ. ಯಾಮುನರು ಶ್ರೀಪತಿಯ ಪ್ರಾರ್ಥನೆ ಮಾಡುತ್ತ ಸದಾ ಅವನಲ್ಲಿ ತಮಗೆ ಭಕ್ತಿಯಿರುವಂತೆ ಅನುಗ್ರಹವಾಗಲಿ ಎಂದು ಬೇಡುತ್ತ ಕೃತಿಯನ್ನು ಆರಂಭಿಸಿದ್ದಾರೆ.

ಆತ್ಮ ಪರಮಾತ್ಮರ ಬಗ್ಗೆ ಪರಿಪರಿಯಾದ ಪರಿಕಲ್ಪನೆಗಳಿವೆ ಎನ್ನುತ್ತ ಇವುಗಳಲ್ಲಿ ನಿಜವನ್ನು ತಿಳಿಯಬೇಕಾದರೆ ಇರುವ ವಾದಗಳಲ್ಲಿ ಇರುವುದೆಲ್ಲವನ್ನೂ - ಹುರುಳನ್ನು - ಖಂಡಿತವಾದ ವಿಮರ್ಶೆಯ ಮೂಲಕ ವಿಶ್ಲೇಶಿಸಬೇಕೆನ್ನುತ್ತ ಯಾಮುನರು ಆತ್ಮದ ಬಗ್ಗೆಯೂ ಪರಮಾತ್ಮನ ಬಗ್ಗೆಯೂ ಇರುವ, ಅಂದಿಗೆ ಪ್ರಚಲಿತವಿದ್ದ ಹಲವಾರು ವಾದವಿವಾದಗಳನ್ನು ವಿವರಿಸಿದ್ದಾರೆ. ಧಾರ್ಮಿಕ ಜ್ಞಾನ, ತತ್ವವನ್ನು ತಿಳಿಯಲು ಉಪನಿಷತ್ತುಗಳು, ಭಗವದ್ಗೀತೆ ಬ್ರಹ್ಮಸೂತ್ರಗಳನ್ನೇ ಮೂಲಾಧಾರವಾಗಿಟ್ಟುಕೊಂಡು ಅವರು ಮುಂದುವರೆದವರು. ತಮಗಿಂತ ಹಿಂದಿದ್ದವರ ವ್ಯಾಖ್ಯಾನಗಳ ವಿಸ್ತೃತ ಪರಿಚಯವೂ ಅವರಿಗಿದ್ದಿತು. ಆಚಾರ್ಯ ಟಂಕ, ದ್ರಮಿಡ, ಭರ್ತೃಹರಿ, ಭರ್ತೃಮಿತ್ರ ಬ್ರಹ್ಮದತ್ತ ಮೊದಲಾದವರ ವಾದಗಳನ್ನು ಪರಿಶೀಲಿಸಿದ್ದಾರೆ. ಭಾಸ್ಕರ, ಶಂಕರಾಚಾರ್ಯ, ಮೊದಲಾದವರನ್ನೂ ತಲಸ್ಪರ್ಶಿಯಾಗಿ ಪರಿಚಯ ಮಾಡಿಕೊಂಡಿದ್ದಾರೆ. ಹೀಗೆ ಎಲ್ಲ ರೀತಿಯವಾದಗಳನ್ನೂ ಪರಿಶೀಲಿಸಿ ತಮ್ಮದೇ ಆದ, ಪೂರ್ವಾಚಾರ್ಯರಿಗೆ ಅಲ್ಲಲ್ಲಿ ಗೋಚರವಾದ ತತ್ವವನ್ನು ಸಾಕ್ಷಾತ್ಕರಿಸಿದ್ದಾರೆ. ಆತ್ಮವೆಂಬುದು ಯಾಮನರ ಪರಿಕಲ್ಪನೆಯಂತೆ ದೇಹ, ಮನಸ್ಸು, ಇಂದ್ರಿಯಗಳು, ವ್ಯಾನ ಉದಾನಗಳಿಗಿಂತ ಬೇರೆಯಾದದ್ದು. ಸ್ವಯಂ ಪ್ರಕಾಶಮಾನವಾಗಿ, ತನ್ನ ಅರಿವಿಗಾಗಿ ಇತರ ಆಲಂಬನವಿಲ್ಲದ್ದು. ಶಾಶ್ವತವಾದದ್ದು ಹಾಗೂ ಪ್ರತಿ ದೇಹದಲ್ಲೂ ಪ್ರತ್ಯೇಕ ಅಸ್ತಿತ್ವ ಹೊಂದಿ ಆನಂದರೂಪಿಯಾದದ್ದು. ಇದು ಪ್ರಜ್ಞೆಗಿಂತಲೂ ಬೇರೆಯಾದ್ದು ಎಂದು ಛಾಂದೋಗ್ಯ ಬೃಹದಾರಣ್ಯ ಪ್ರಶ್ನ ಮೊದಲಾದ ಉಪನಿಷತ್ತುಗಳ ಪ್ರಮಾಣಗಳನ್ನು ನೀಡುತ್ತಾರೆ. ನ್ಯಾಯ, ಸಾಂಖ್ಯ ದರ್ಶನಗಳನ್ನು ಪರಿಶೀಲಿಸಿ ಬೌದ್ಧ ದರ್ಶನದ ಪರಿಶೀಲನೆ ನಡೆಸುತ್ತಾರೆ. ಅಲ್ಲಿಗೆ ಪುಸ್ತಕ ತ್ರುಟಿತವಾಗಿ, ಮಿಕ್ಕ ಭಾಗಗಳು ಲುಪ್ತವಾಗಿವೆ.

ಈಶ್ವರ ಸಿದ್ಧಿ : ಹದಿನೆಂಟು ಶ್ಲೋಕಗಳನ್ನೊಳಗೊಂಡ ದೈವದ ಅಸ್ತಿತ್ವವನ್ನು ನಿರೂಪಿಸುವ ಗದ್ಯ ಕೃತಿಯಿದು. ನ್ಯಾಯ ಮೀಮಾಂಸಾದರ್ಶನಗಳ ಎರಡು ರೀತಿಯ ವಾದಗಳನ್ನೂ ಪರಿಶೀಲಿಸಿ ಅವುಗಳಲ್ಲಿನ ಲೋಪ ದೋಷಗಳನ್ನು ಬೆಳಕಿಗೆ ಒಡ್ಡಿ ದೇವರ ಇರುವಿಕೆಯನ್ನು ಸಕಾರಣ ನಿರೂಪಿಸಿದ್ದಾರೆ. ಆದರೆ ಈಶ್ವರಸಿದ್ಧಿ ಇದ್ದಕ್ಕಿದ್ದಂತೆ ಕೊನೆಗೊಳ್ಳುತ್ತದೆ. ವಾದ ವಿವಾದಗಳ ವಿವರಣೆಯಲ್ಲಿರುವ ಹಂತದಲ್ಲಿಯೇ ನಿಂತಿದೆ. ಮಿಕ್ಕದ್ದು ಲುಪ್ತವಾಗಿದೆ.

ಸಂವಿತ್ ಸಿದ್ಧಿ : 222 ಶ್ಲೋಕಗಳ ವೇದಾಂತ ಕೃತಿಯಿದು. ಮೊದಲು, ಕೊನೆ, ಮಧ್ಯಗಳಲ್ಲಿ ಅಲ್ಲಲ್ಲಿ ಖಿಲವಾಗಿರುವ ಕೃತಿ. ಅಂದಿಗೆ ಪ್ರಚಲಿತವಾಗಿದ್ದ ಪ್ರಸಿದ್ಧವಾದ ಅದ್ವೈತ, ಜೈನ, ಬೌದ್ಧ, ಸಾಂಖ್ಯ ತತ್ವಗಳನ್ನು ಇಲ್ಲಿ ಪರಿಶೀಲಿಸಿ ಯಾಮುನರು ತಮ್ಮದೇ ಆದ ಮೌಲಿಕವಾದ ರೀತಿಯಲ್ಲಿ ವೇದಾಂತಕ್ಕೆ ಹೊಸ ಕಾಣ್ಕೆಗಳನ್ನು ತಂದುಕೊಟ್ಟಿದ್ದಾರೆ. ಅದ್ವೈತ ವಿಶೇಷವಾದ ವಿಶ್ಲೇಷಣೆಗೆ ಒಳಗಾಗಿದೆ. ಉದಾಹರಣೆಗೆ ಬ್ರಹ್ಮ ಅದ್ವಿತೀಯನೆಂಬ ಉಪನಿಷದ್ವಾಕ್ಯವನ್ನು ತೆಗೆದುಕೊಂಡು ಅದರ ಶಾಂಕರೀಯ ಅರ್ಥವಿವರಣೆ ಸೂಕ್ತವಲ್ಲವೆಂದು ವಿವರಿಸಿ, ಯಾಮುನರು ತಮ್ಮ ವಿವರಣೆಯನ್ನು ಒದಗಿಸಿದ್ದಾರೆ. ಪ್ರಶ್ನೆಯೆಂದರೆ ಇಡೀ ಕೃತಿಯ ಉಪಲಬ್ಧ ಇಲ್ಲದಿರುವುದಷ್ಟೇ ಅಲ್ಲ; ಇರುವುದೂ ಬಹುಪಾಲು ತ್ರುಟಿತ. ಹಲವಾರು ಭಾಗಗಳು, ಅಧ್ಯಾಯಭಾಗಗಳು, ಶ್ಲೋಕಭಾಗಗಳು ಹಲವೆಡೆ ಅಪೂರ್ಣ. ಹೀಗಾಗಿ ಸಂವಿತ್ ಸಿದ್ಧಿಯ ಪೂರ್ಣ ಪರಿಚಯ ಕಷ್ಟವಾಗಿದೆ.

# ಆಗಮ ಪ್ರಾಮಾಣ್ಯ

ಪಾಂಚರಾತ್ರಾಗಮದ ಸತ್ಪ್ರಮಾಣತೆಯನ್ನು ಸಮಂಜಸತೆಯನ್ನು ಸಾಧಿಸಲು ಬರೆದ ಕೃತಿಯಿದು. ಅಂದಿಗೆ ಪಾಂಚರಾತ್ರದ ಬಗ್ಗೆ ಸರಿಯಾದ ಅವಗಾಹನೆಯಿರಲಿಲ್ಲವಾಗಿ, ಅದನ್ನು ಸಕಾರಣವಾಗಿ ಎತ್ತಿ ಹಿಡಿದು, ಅದರ ವಿರುದ್ಧವಾದ ಸಂದೇಹಗಳಿಗೆ ಸೂಕ್ತ ಸಮಾಧಾನವನ್ನೊದಗಿಸಲಾಗಿದೆ.

ವೇದಗಳಲ್ಲಿ ಯಜ್ಞಕ್ರಿಯೆಗೆ ಅವಧಾರಣೆಯಿದ್ದರೆ, ಆಗಮಗಳಲ್ಲಿ ಅರ್ಚಾಮೂರ್ತಿಯ ಆರಾಧನೆಗೆ ಅವಧಾರಣೆಯಿದೆ. ಈ ಅರ್ಚೆಯ ಆರಾಧನೆಯಲ್ಲಿ ವೈಷ್ಣವಾಗಮಗಳೆರಡು ವೈಖಾನಸ, ಪಾಂಚರಾತ್ರ. ವೈಖಾನಸ ಆಗಮವು ವಿಖನಸಾಚಾರ್ಯರಿಂದ ಶ್ರೌತಸೂತ್ರಗಳ ಆಧಾರದಲ್ಲಿ ಬಂದ ಮೊದಲ ಆಗಮವಾದ್ದರಿಂದ ಆ ಬಗ್ಗೆ ಹೆಚ್ಚಿನ ಪ್ರಶ್ನೆಗಳಿರಲಿಲ್ಲ. ಮೀಮಾಂಸಕರೂ ತುಸುಮಟ್ಟಿಗೆ ಅದ್ವೈತದವರೂ ಪಾಂಚರಾತ್ರದ ಬಗ್ಗೆ ಸಂದೇಹ ವ್ಯಕ್ತಪಡಿ
ಸಿದರು. ಅವುಗಳನ್ನು ನಿವಾರಿಸಲು ಯಾವ
ಯಶಸ್ವಿಯಾದ ಪ್ರಯತ್ನ ನಡೆಸಿರುವುದನ್ನಿ
ಬಹುದು. ಭೃಗು, ನಾರದ ಭಾರದ್ವಾಜರು
ಪರಂಪರೆಯನ್ನೇ ಅನುಸರಿಸಿದರೂ ಪಾಂ
ವನ್ನು ಒಪ್ಪಿ ನಡೆದವರು. ವೈದಿಕ ಯಜ್ಞ
ಮಾಡಿದವರೂ ಆಗಮಗಳಲ್ಲಿ ವಿವರಿಸಿ
ಆಲಯನಿರ್ಮಾಣ ವಿಗ್ರಹಪ್ರತಿಷ್ಠೆ ಉತ್ಸವ
ಹಣೆಗಳನ್ನು ಮಾಡುವುದನ್ನು ಕಾಣಬಹುದ
ತ್ತಾರೆ ಯಾಮುನರು. ಪಾಂಚರಾತ್ರವನ್ನು ಅ
ಸುವ ಭಾಗವತರು ವೇದ ಮೂಲವಾದ
ಳನ್ನೂ ಆಚರಿಸುವುದರಿಂದ ಅವರನ್ನು ವೇದ
ನರೆನ್ನಲಾಗದು ಎಂದು ಪುರಾಣ, ಸ್ಮೃತಿ
ಉಪನಿಷದ್ವಾಕ್ಯಗಳಿಂದ ಸಮರ್ಥನೆಯನ್ನೂ
ದ್ದಾರೆ.

ವಿಷ್ಣುವನ್ನು ಕುರಿತಾದ ಮಂಗಳ ಶ್ಲೋ
ಆರಂಭವಾಗುವ ಆಗಮ ಪ್ರಾಮಾಣ್ಯ
ಲೀನ ಪಂಡಿತ ಪ್ರಪಂಚವನ್ನೂ ನಮ್ಮ ಮುಂ
ದಿಡುತ್ತದೆ. ಅವರ ಗುಣ, ದೋಷಗಳನ್ನೂ
ರಿಸಿ, ವಿದ್ವಜ್ಜನ ಈರ್ಷ್ಯಾಸೂಯಾರಹಿತರಾಗಿ
ವತ ಪದ್ಧತಿಯನ್ನು ಗಮನಿಸಲು ಬೇಡುತ್ತಾರೆ
ತಾತಂದಿರಾದ ನಾಥಮುನಿಗಳ ಹಾಗೂ
ಶಿಷ್ಯರ ಕೀರ್ತಿ ಚಿರವಾಗಲಿ ಎಂದು
ಕೃತಿಯನ್ನು ಮುಗಿಸುತ್ತಾರೆ. ಕಾರಣ
ಪಾಂಚರಾತ್ರದ ವಿರುದ್ಧ ವಾದಗಳನ್ನು ತವ
ಹಗಳ ಮೂಲಕ ಧೂಳೀಪಟ ಮಾಡಿದವ
ಗಿದ್ದರು. (ಇವರುಗಳಾರ ಕೃತಿಗಳೂ
ಬ್ಧವಿಲ್ಲ. ವೇದಾಂತ ದೇಶಿಕರು ಪುಂಡರಿ
ಚಾರ್ಯರದೆಂದು ಒಂದು ಶ್ಲೋಕವನ್ನುದ
ದ್ದಾರೆ. ಈತ ಯಾಮುನರು ಹೇಳುವ ನಾಥ
ಗಳ ಶಿಷ್ಯರಲ್ಲಿ ಒಬ್ಬರೇ ಎಂಬುದು ತಿಳಿದಿಲ್ಲ.

# ಮಹಾಪುರುಷ ನಿರ್ಣ

ಈ ಪುಸ್ತಕ ಯಾಮುನಾಚಾರ್ಯರ ಎಂ
ಕೃತಿಯಾಗಿರಬೇಕು. ವಿಷ್ಣುವನ್ನು ಮಹಾ
- ಪುರುಷೋತ್ತಮ ಎಂಬುದಾಗಿ ಎಲ್ಲ ನಿ
ಸಲಾಗಿದೆ. ಆಗಮ ಪ್ರಾಮಾಣ್ಯದಲ್ಲಿ ವಿ
ದೇವತೆಗಳಲ್ಲಿ ಶ್ರೇಷ್ಠತಮನೆಂದು ಸಾಧಾ
ರಿಸುವಾಗ ಈ ಕೃತಿಯತ್ತ ಗಮನವನ್ನು
ಲಾಗಿದೆ. ಹೀಗಾಗಿ ಇದು ಆಗಮ ಪ್ರಾ
ಮೊದಲೇ ರಚಿತವಾಗಿರಬೇಕು. ವೇದಾಂ
ಕರು ತಮ್ಮ ನ್ಯಾಯಸಿದ್ಧಾಂಜನದ ಈಶ್ವರ ಪ
ದಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. ಆದರೆ ಈ
ಉಪಲಬ್ಧಿಯಿಲ್ಲ.

— ಬಿ. ಎನ್. ಎಸ

ಕೃಪೆ - ಆಧಾರ - ಡಾ|| ವಿ. ವರದಾಚಾರಿ

ಯಾಮುನಾಚಾ

# ಸ್ತೋತ್ರರತ್ನದಲ್ಲಿ ರಾಮ ಭಕ್ತಿ

ಯತಿರಾಜ ರಾಮಾನುಜರ ರೂಪಿಸಿದ ವಿಶಿಷ್ಟಾದ್ವೈತ ಸಂಪ್ರದಾಯದಲ್ಲಿ ಶ್ರೀರಾಮಭಕ್ತಿಗೆ ಒಂದು ವಿಶಿಷ್ಟಸ್ಥಾನ ನೀಡಲಾಗಿದೆ. ವಾಲ್ಮೀಕಿ ರಾಮಾಯಣದ ಟೀಕೆಯನ್ನು ರಚಿಸಿರುವವರಲ್ಲಿ ಮಾಧವ ಯೋಗೀಂದ್ರ, ಗೋವಿಂದಾಚಾರ್ಯ, ರಾಮಾನುಜ ಕಂದಾಳರು ಮುಖ್ಯರು. ಇವರು ಹಾಗೂ ಈ ಸಂಪ್ರದಾಯದ ಇನ್ನಿತರೇ ಅನುಯಾಯಿಗಳೂ ಕೂಡ ವಾಲ್ಮೀಕಿ ರಾಮಾಯಣದ ವ್ಯಾಖ್ಯಾನಗಳನ್ನು ರಚಿಸಿರುವರು.

ಇವುಗಳಲ್ಲೆಲ್ಲ ಗೋವಿಂದಾಚಾರ್ಯರದೇ ಅತ್ಯುತ್ತಮವಾದ ವ್ಯಾಖ್ಯಾನವಾಗಿದೆ. ಹನ್ನೆರಡು ವರ್ಷಗಳವರೆಗೆ ಅಖಂಡ ತಪಸ್ಸನ್ನು ಮಾಡಿ, ಶ್ರೀರಾಮನ ಆರಾಧನೆಯನ್ನು ಮಾಡಿ, ಆತನ ಕೃಪೆಗೆ ಪಾತ್ರರಾದ ನಂತರವೇ ಈ ವ್ಯಾಖ್ಯಾನವನ್ನು ಬರೆಯಲು ಅವರು ಪ್ರಾರಂಭಿಸಿದುದು.

ವಿಶಿಷ್ಟಾದ್ವೈತ ಸಂಪ್ರದಾಯದ ಆದ್ಯಪ್ರವರ್ತಕರು ಭಗವಾನ್ ರಾಮಾನುಜರು. ಆದರೆ ಇವರಿಗೆ ರಾಮಭಕ್ತಿಯ ದೀಕ್ಷೆ ಅವರ ಪರಮಗುರುಗಳಾದ ಯಾಮುನಾರ್ಯರಿಂದಲೇ ಪ್ರಾಪ್ತವಾಗಿತ್ತು.

ಯಾಮುನರು ಶ್ರೀ ವೈಷ್ಣವ ಸಂಪ್ರದಾಯದ ಮಹಾನ್ ಆಚಾರ್ಯರಾಗಿದ್ದಾರೆ. ಇವರು ನಾಥಮುನಿಗಳ ಮೊಮ್ಮಗನೂ, ಈಶ್ವರ ಮುನಿಗಳ ಪುತ್ರರೂ ಆಗಿದ್ದಾರೆ. ಇವರು ಜೀವನ ಪೂರ್ತಿ ಭಗವತ್ ಸೇವೆ ಹಾಗೂ ಭಗವತ್ ಕೈಂಕರ್ಯದಲ್ಲಿಯೇ ಕಳೆದಿದ್ದಾರೆ. ಇವರಿಗೆ ರಾಮಾನುಜರ ಮೇಲೆ ತುಂಬಾ ಪ್ರೇಮವಿದ್ದಿತು. ಶ್ರೀ ವೈಷ್ಣವ ಸಂಪ್ರದಾಯವನ್ನು ಅವರು ಕೈಹಿಡಿದು ನಡೆಸಿಕೊಂಡು ಹೋಗುವರು ಎಂಬ ನಂಬಿಕೆ ಯಾಮುನರಿಗಿದ್ದಿತು.

ಅಂತೆಯೇ ಭಗವಾನ್ ರಾಮಾನುಜರಿಗೂ ಕೂಡ ಯಾಮುನರ ಬಗ್ಗೆ ಅಪಾರ ಭಕ್ತಿಭಾವವಿದ್ದಿತು.

ಭಗವತ್ ಸೇವೆಯನ್ನು ಮಾಡುತ್ತಾ ಯಾಮುನರು ಭಗವಂತನ ಗುಣಗಾನವನ್ನು ಸದಾ ಮಾಡುತ್ತಿದ್ದರು. ಇದರೊಂದಿಗೆ ಭಗವಂತನ ಎದುರು ತಮ್ಮ ದೈನ್ಯವನ್ನು ಪ್ರಕಟಿಸುತ್ತಿದ್ದರು.

ಯಾಮುನರ ಎಲ್ಲ ರಚನೆಗಳೂ ಲಭ್ಯವಾಗಿಲ್ಲ. ಕೇವಲ ಅವರ ಆಗಮ ಪ್ರಾಮಾಣ್ಯಂ, ಸ್ತೋತ್ರರತ್ನ ಸಿದ್ಧಿತ್ರಯ ಹಾಗೂ ಗೀತಾರ್ಥ ಸಂಗ್ರಹ -- ಗ್ರಂಥಗಳಷ್ಟೇ ನಮ್ಮವರೆವಿಗೆ ಉಳಿದು ಬಂದಿವೆ. ಯಾಮುನರಿಗೆ ಆಳವಂದಾರ್ ಎನ್ನುವ ಇನ್ನೂ ಒಂದು ಹೆಸರು ಇದ್ದಿತು. ಇದರಿಂದ ವಿದ್ವತ್ ಜನರು 'ಸ್ತೋತ್ರರತ್ನ'ವನ್ನು 'ಆಳವಂದಾರ್ ಸ್ತೋತ್ರ'ವೆಂಬ ಹೆಸರಿನಿಂದ ಕರೆಯುವರು. ಈ ಹೆಸರೇ ವಿದ್ವಜ್ಜನರ ನಡುವೆ ಜನಪ್ರಿಯವಾಗಿದೆ. ಇದು ಒಂದು ಸಂಪ್ರದಾಯದ ಪುಸ್ತಕವಾಗದೆ ಎಲ್ಲ ಭಕ್ತ ಸಮುದಾಯದ, ಎಲ್ಲ ಸಂಪ್ರದಾಯಗಳ ವಿದ್ವಜ್ಜನ ಭಕ್ತರ ಕಂಠಹಾರವಾಗಿ ಪರಿಣಮಿಸಿದೆ.

ಚೈತನ್ಯ ಮಹಾಪ್ರಭುವೂಕೂಡ ತನ್ನ ಕೀರ್ತನೆಗಳಲ್ಲಿ ಹಾಗೂ ಪ್ರವಚನಗಳಲ್ಲಿ ಈ ಸ್ತೋತ್ರದ ಶ್ಲೋಕಗಳನ್ನು ಬಹಳವಾಗಿ ಉಪಯೋಗಿಸುತ್ತಿದ್ದನು ಹಾಗೂ ಅವುಗಳನ್ನು ಆನಂದದಿಂದ ಹಾಡುತ್ತಿದ್ದನು. ಇದಕ್ಕೆ ಉದಾಹರಣೆಯಾಗಿ ಚೈತನ್ಯ ಚರಿತಾಮೃತದಲ್ಲಿ ಇವುಗಳ ಉಲ್ಲೇಖವು ಬಹಳವು ಬಹಳಷ್ಟು ಸಲ ಬಂದಿದೆ.

ಈ ಸ್ತೋತ್ರದಲ್ಲಿ ಅನೇಕ ದಿವ್ಯಗುಣಗಳಿವೆ. ಆದಾಗ್ಯೂ ಕಾವ್ಯರಚನೆ, ಅಲಂಕಾರಗಳ ವಿಶೇಷತೆ, ಭಾವಸೌಂದರ್ಯ, ದೈನ್ಯ ಹಾಗೂ ಭಗವಂತನ ಮೇಲೆ ಸಂಪೂರ್ಣವಾಗಿ ಆಧಾರ ಪಟ್ಟಿರುವುದು, ಶರಣಾಗತಿಯ ಪ್ರಸ್ತಾಪ ಹಾಗೂ ಯಾವುದೇ ಧರ್ಮದ ಬಗ್ಗೆ ಪಕ್ಷಪಾತವನ್ನು ತೋರದೆ ಇರುವುದು -- ಈ ಗುಣಗಳಿಂದ ಪ್ರತಿಯೊಬ್ಬ ಭಕ್ತ -- ಓದುಗನೂ, ಇವನ್ನು ಓದಿದ ಕೂಡಲೇ ಇದರ ಕಡೆಗೆ ತಪ್ಪದೆ ಆಕರ್ಷಿತನಾಗುವನು.

ಯಾಮುನರ ನಿರ್ಮಲ ಭಕ್ತಿಯು 'ಸ್ತೋತ್ರರತ್ನ'ದಲ್ಲಿ ಪ್ರಸ್ಫುಟಿತವಾಗಿದೆ. ಅವರ ಹೃದಯದಲ್ಲಿನ ಗಂಭೀರ ಅನುರಾಗ ಹಾಗೂ ಪ್ರಗಾಢ ಪ್ರೇಮಗಳು ಆ ಕಾವ್ಯದಲ್ಲಿ ಸರ್ವತ್ರ ಹರಡಿದೆ. ಪ್ರತಿ ಪದದಲ್ಲಿಯೂ ಆತ್ಮ ವಿಸರ್ಜನೆಯೆ ಭಾವ ತುಂಬಿದೆ.



ಪರಮಾತ್ಮನು ಅಶರಣರಿಗೆ ಶರಣನಾಗಿಯೂ, ನಿರಾಶ್ರಯರಿಗೆ ಆಶ್ರಯದಾತನಾಗಿಯೂ ಇರುವನು. ಆದುದರಿಂದ ಯಾಮುನರು ತಮ್ಮದೆಲ್ಲವನ್ನೂ ಪರಮಾತ್ಮನಿಗೇ ನಿವೇದಿಸಿರುವರು. ಪ್ರಾಪಂಚಿಕ ವ್ಯವಹಾರಗಳೆಲ್ಲವನ್ನು ಮರೆತು ಭಗವಂತನ ಚರಣಕಮಲಗಳ ಆಶ್ರಯ ಪಡೆಯುವುದಕ್ಕಾಗಿ ಬಹಳಷ್ಟು ವ್ಯಾಕುಲರಾಗಿರುತ್ತಾರೆ.

ಇವೆಲ್ಲಕ್ಕಿಂತ ಹೆಚ್ಚಾಗಿ ಯಾಮುನರಿಗೆ ಶ್ರೀರಾಮನಲ್ಲಿ ಅಪಾರ ಭಕ್ತಿ ಇತ್ತು ಎಂಬುದಕ್ಕೆ ಅನ್ವಯವಾಗುವ ಅನೇಕ ಶ್ಲೋಕಗಳಿವೆ. ಇವರು ಶ್ರೀರಾಮನ ಅನನ್ಯಭಕ್ತರು.

ಯಾಮುನರ ಹೃದಯವು ಶುದ್ಧವೂ, ಪವಿತ್ರವೂ ಆಗಿದ್ದು, ಶ್ರೀರಾಮಭಕ್ತಿಯಿಂದ ಪರಿಪೂರ್ಣಗೊಂಡಿತ್ತು.

ಶ್ರೀರಾಮನು ತನ್ನ ಭಕ್ತರನ್ನು ತನ್ನ ಹೃದಯದಲ್ಲಿ ಸದಾ ಇರಿಸಿಕೊಳ್ಳುವಂತೆ, ಭಕ್ತರೂ ಆತನನ್ನು ತಮ್ಮ ಹೃದಯದಲ್ಲಿ ಸ್ಥಾಪಿಸಿಕೊಳ್ಳುತ್ತಿದ್ದರು. ಯಾಮುನರ ವಿಚಾರದಲ್ಲಿ ಈ ಮಾತು ಸತ್ಯವಾಗಿತ್ತು.

ಅವರು ಈ ಸ್ತೋತ್ರದಲ್ಲಿ ಒಮ್ಮೆ ರಾಮನನ್ನು ಒಮ್ಮೆ ಕೃಷ್ಣನನ್ನು ಒಮ್ಮೆ ವಾಮನ, ಒಮ್ಮೆ ಶೇಷಶಾಯಿ ಶ್ರೀಮನ್ನಾರಾಯಣನನ್ನು ಸ್ತೋತ್ರಮಾಡಿದ್ದರೂ, ಅವರವರ ನಡುವೆ ಯಾವುದೇ ಭೇದಭಾವವನ್ನೂ ತೋರುತ್ತಿರಲಿಲ್ಲ. ಎಲ್ಲರ ಗುಣಗಳನ್ನೂ ಅವರು ಸದಾ ಸ್ಮರಿಸುತ್ತಿದ್ದರು.

ಪರಮಾತ್ಮನು ಶರಣಾಗತ ವತ್ಸಲನು ಹಾಗೂ ಆಶ್ರಿತವತ್ಸಲನು, ಹಾಗೆ ಶರಣಾಗತರಾದವರ ದೋಷಗಳನ್ನು ಪಾಪಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅವರನ್ನೆಲ್ಲ ತನ್ನಲ್ಲೆ ಇರಿಸಿಕೊಳ್ಳುವನು. ಅವರುಗಳನ್ನೂ ಎಂದಿಗೂ ತ್ಯಜಿಸುವುದಿಲ್ಲ.

ಈ ಭಾವನೆಯನ್ನು ನೆನಪಿನಲ್ಲಿಟ್ಟುಕೊಂಡೇ ಯಾಮುನರು ಹೇಳುವರು, 'ಹೇ ಸ್ವಾಮಿ! ನೀನು ನಿನ್ನ ವಿಭೀಷಣನ ಎದುರು ಮಾಡಿದ ಪ್ರತಿಜ್ಞೆಯನ್ನು ನೆನಪಿಸಿಕೋ! ಎಲ್ಲರೆದುರಿಗೆ 'ನಾನು ನಿಮ್ಮೆಲ್ಲರ

ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

ಶ್ರೀ ವೆಂಕಟೇಶ ಸುಪ್ರಭಾತ
ವ್ಯಾಖ್ಯಾನ ಸಹಿತ ದೆಲೆ : 2-50

ಗುರು ಶ್ರೀಶ ವಿಠಲದಾಸರ ಕೃತಿಗಳು
ಸಂ - ಕೆ. ಅಪ್ಪಣ್ಣಾಚಾರ್ಯ ದೆಲೆ : 6-00

ದಾಸ ತತ್ತ್ವ ಪ್ರಕಾಶಿಕೆ
ಸಂ - ಕೆ. ಅಪ್ಪಣ್ಣಾಚಾರ್ಯ ದೆಲೆ : 10-00

ಸ್ತೋತ್ರ ಕುಸುಮ ಮಾಲಾ
ಸಂ - ಎಂ. ಎಸ್. ವೆಂಕಟಾಚಲಂ ದೆಲೆ : 3-00

ತ್ಯಾಗರಾಜ ಸ್ವಾಮಿ ಕೃತಿಗಳ
ಹಲವು ಮುಖಗಳು
-ಎಸ್. ಎಸ್. ಮೂರ್ತಿ ದೆಲೆ : 5-00

ಭಕ್ತ ಪುರಂದರದಾಸರು
-ಕೆ. ಅಪ್ಪಣ್ಣಾಚಾರ್ಯ ದೆಲೆ : 2-60

ಕರ್ನಾಟಕ ಹರಿದಾಸರು
ತೆಲುಗು, ಹಿಂದಿ, ಆಂಗ್ಲ, ಕನ್ನಡ ದೆಲೆ : 2-25

ಶ್ರೀ ಶ್ರೀನಿವಾಸನ ಹಾಡುಗಳು
(ಪ್ರಸನ್ನ ವೆಂಕಟದಾಸರು)
ಸಂ - ಕೆ. ಅಪ್ಪಣ್ಣಾಚಾರ್ಯ ದೆಲೆ : 7-00

ಶ್ರೀ ಪ್ರಸನ್ನ ವೆಂಕಟದಾಸರು
- ವಿ. ಬಾದರಾಯಣ ಮೂರ್ತಿ ದೆಲೆ : 0-80

ಶ್ರೀ ಮಹಿಪತಿ ದಾಸರು
- ದ. ನ. ಶಾನಭಾಗ ದೆಲೆ : 0-85

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ಕೂಡಲೇ ಬರೆಯಿರಿ.

ಸಂಪಾದಕರು
ಪುಸ್ತಕ ಮಾರಾಟ ವಿಭಾಗ,
ಸಪ್ತಗಿರಿ, ತಿ.ತಿ.ದೇ., ತಿರುಪತಿ.

ವನು!' ಎಂದು ಹೇಳಿ 'ಯಾರೇ ನನಗೆ ಶರಣಾಗಲಿ, ಒಮ್ಮೆ ಶರಣಾದವನು, ಅವನು ಎಂತಹ ಪಾಪಿಯೇ ಆಗಿರಲಿ, ಅಂತಹವನಿಗೆ ಮೂರುಲೋಕಗಳಿಂದಲೂ ಕೂಡ ಅಭಯ ನೀಡುವೆ!' ಎಂದು - ನಿನ್ನ ಆ ಪ್ರತಿಜ್ಞೆಯನ್ನು ನೆನಪಿನಲ್ಲಿಟ್ಟುಕೊಂಡು, ನನ್ನನ್ನು ಪೂರ್ತಿಯಾಗಿ ನಿನ್ನವನನ್ನಾಗಿ ಮಾಡಿಕೊ! ನೀನು ಹೀಗೆ ಮಾಡದೆ ಹೋದಲ್ಲಿ, ನನ್ನನ್ನೊಬ್ಬನನ್ನು ಬಿಟ್ಟು, ಉಳಿದಿರುವ ಮೂರುಲೋಕಗಳಲ್ಲಿ ಜೀವಿಗಳಿಗಾಗಿ ಈ ಪ್ರತಿಜ್ಞೆ ಮಾಡಿದೆಯೇನು! ಶರಣಾಗತರನ್ನು ಪಾಲಿಸುವ ನಿನ್ನ ವ್ರತವು ನನ್ನಂತಹ ಅಕಿಂಚನನಿಗಾಗಿ ಇಲ್ಲವೇನು? ಆದುದರಿಂದ ನಾನು ನಿನ್ನ ಅನುಕಂಪಕ್ಕೆ ಪಾತ್ರನಾಗದೇಕಾಗಿರುವವನು, ನೀನು ನನ್ನ ಮೇಲೆ ಕೃಪೆ ತೋರಲೇಬೇಕು ಎನ್ನುವುದು ಸಿದ್ಧವಾಗುವುದಿಲ್ಲವೇನು?

ಇದರ ಮೂಲ ಶ್ಲೋಕವು ಈ ರೀತಿ ಇದೆ--

ನನು ಪ್ರಪನ್ನಃ ಸಕೃದೇವ ನಾಥ
ತವಾಹಮಸ್ಮೀತಿ ಚ ಯಾಚಮಾನಃ
ತವಾನುಕಂಪಃ ಸ್ಮರತಃ ಪ್ರತಿಜ್ಞಾಂ
ಮದೇಕವರ್ಜ್ಯ ಕಿಮಿದಂ ವ್ರತಂ ತೇ

'ಹೇ ರಘುವರ! ಎಲ್ಲರಿಗಿಂತ ದೊಡ್ಡ ಅಪರಾಧಿಯಾದ, ಇಂದ್ರನ ಪುತ್ರ ಕಾಗೆಯ ರೂಪವನ್ನು ಧರಿಸಿದ್ದ ಜಯಂತನನ್ನೂ ಕೂಡ ನೀನು ಕ್ಷಮಿಸಿಬಿಟ್ಟಿದ್ದೆ. ಅವನು ಪತಿವ್ರತಾ ಶಿರೋಮಣಿಯಾದ ಜಗನ್ಮಾತೆಯಾದ ಸೀತಾಮಾತೆಯ ಶರೀರವನ್ನು ತನ್ನಪಾದ ಹಾಗೂ ಕೊಕ್ಕುಗಳಿಂದ ಕಾರಣವಿಲ್ಲದೆ ಆಘಾತ ಮಾಡಿ ಕ್ಷತ - ವಿಕ್ಷತಳನ್ನಾಗಿ ಮಾಡಿದ್ದ. ಸೀತಾಮಾತೆಯು ಅವನನ್ನು ಹಿಡಿದು, ನಿಮ್ಮ ಪಾದಗಳ ಬಳಿ ಬೀಳಿಸಿದ್ದಳು. ಆಗ ನಿನಗೂ ಕೂಡ ಅವನ ಬಗ್ಗೆ ಕರುಣೆ ಬಂದಿತು. ಅವನು ನಿನಗೆ ಶರಣಾದುದರಿಂದ, ಅವನಿಗೆ ಸಾಯುಜ್ಯ ನೀಡಿದೆ. ನಿನ್ನ ಈ ಕ್ಷಮಾಶೀಲಗುಣವನ್ನು ಅಳೆಯಲು ಸಾಧ್ಯವೆ ದೇವ?

ರಘುವರ ಯದ್‌ಭೂಸ್ತ್ವಂ
ತಾದೃಶೋ ವಾಯಸಸ್ಯ
ಪ್ರಣತ ಇತಿ ದಯಾಲುರ್ಯಸ್ಯ
ಚೈದ್ಯಸ್ಯ ಕೃಷ್ಣಃ
ಪ್ರತಿಭವಮಪರಾದ್ಧುಃ
ಮುಗ್ಧಸಾಯುಜ್ಯದೋಽಭೂಃ
ವದ ಕಿಮುಪದಮಾಗಸ್ತಸ್ಯ
ತೇಽಸ್ತಿ ಕ್ಷಮಾಯಾಃ

ಭಗವಂತನ ಹೃದಯವು ಅನಂತ ಗುಣಗಳ ನಿವಾಸಸ್ಥಾನ. ಆದುದರಿಂದ ಆತನನ್ನೇ ಸದಾ ನಮ್ಮೆದುರಿಗೆ ಇರಿಸಿಕೊಂಡು ಆತನ ಪರಿಚರ್ಯೆ, ಉ... ಸನೆ, ಸ್ತುತಿ ಇತ್ಯಾದಿಗಳನ್ನು ನಡೆಯಿಸದೇಕಾದ... ಗಳು ನಿರಂತರವಾಗಿ ಹೆಚ್ಚುತ್ತ ಹೋಗಬೇಕು - ... ವುದು ಯಾಮುನರ ಅಭಿಮತ.

ವಶೀ ವದಾನ್ಯೋ ಗುಣವಾನ್ ಋಜುಃ ಶು...
ಮೃದುರ್ದಯಾಲುಃ ಮಧುರಃ ಸ್ಥಿರಸ್ಸಮಃ
ಕೃತೀ ಕೃತಜ್ಞಸ್ತ್ವಮಸಿ ಸ್ವಭಾವತಃ
ಸಮಸ್ತಕಲ್ಯಾಣಗುಣಾಮೃತೋದಧಿಃ

ಈ ಕಾರಣಗಳಿಂದಲೇ ತಮ್ಮ ವಿಶುದ್ಧ ಬ... ಅಪರಿಮಿತವಾದ ದೈನ್ಯದಿಂದ ಕೂಡಿದ ನಿ... ಮತೆ ಹಾಗೂ ಸದಾ ನಿರ್ವಹಿಸುವ ಸೇವಾಬುದ್ಧಿ ಅದ್ಭುತ ಪರಿಚಯವನ್ನು ಯಾಮುನರು ನಿ... ದ್ವಾರೆ.

ಭವಂತ ಮೇವಾನುಚರನ್ ನಿರಂತರಂ
ಪ್ರಶಾಂತ ನಿಶ್ಶೇಷ ಮನೋರಥಾಂತರಃ
ಕದಾಹ ಮೈಕಾಂತಿಕ ನಿತ್ಯಕಿಂಕರಃ
ಪ್ರಹರ್ಷಯಿಷ್ಯಾಮಿ ಸನಾಥ ಜೀವಿತಃ

ಯಾಮುನರು ಹೇಳುತ್ತಾರೆ - 'ಪ್ರಭು' ನನ... ಕಾಮನೆಗಳನ್ನು ಅಭಿಲಾಷೆಗಳನ್ನು ತ್ಯಜಿಸಿದ್ದೇ... ನಿರ್ಮೂಲ ಮಾಡಿದ್ದೇನೆ. ನನಗಿರುವುದು ಒಂ... ಆಸೆ. ನಿನ್ನ ಪಾದಪದ್ಮಗಳನ್ನು ಅಹರ್ನಿಶಿ, ಅಖ... ವಾಗಿ ಉಪಾಸನೆ ಮಾಡುವ ಸೇವಾ ಸೌಭಾಗ್ಯ... ರೆಯಲಿ ಎಂದು ಬೇಡುತ್ತೇನೆ. ಇದನ್ನು ಏಕಾ... ವಾಗಿ, ಅನನ್ಯ ಸೇವಕನಂತಹ ಸೇವಾನಿಷ್ಠೆಯಿ... ಮಾಡಬೇಕೆಂದಿದ್ದೇನೆ. ಹೀಗಾದಲ್ಲಿ ಖಂಡಿತ... ಗಿಯೂ ನನಗೆ ಮೋಕ್ಷಪ್ರಾಪ್ತಿಗಿಂತಲೂ ಹೆ... ಆನಂದವಾಗುತ್ತದೆ. ನನ್ನ ಜೀವನವು ಧನ್ಯವಾ... ವುದೇ ಅಲ್ಲದೆ ಸಫಲವೂ ಆಗುವುದು. ಆದರೆ ... ಲ್ಲವೂ ನಿನ್ನ ಕೃಪೆಯಿಂದಷ್ಟೇ ಸಾಧ್ಯವಾಗುವುದು. ... ಈ ರೀತಿಯ ಅಂತರಂಗ ಕೈಂಕರ್ಯವನ್ನು ಸ್ವೀ... ರಿಸಿ, ನನ್ನನ್ನು ಆನಂದಗೊಳಿಸು. ಆದರೆ ಈ ... ನನ್ನ ಮೇಲೆ ಯಾವಾಗ ಬೀಳುವುದೋ, ಯಾ... ಗೊತ್ತು?

ಯಾಮುನರ ಭಗವಂತನನ್ನು ಕುರಿತಾದ ದೈ... ಭಾವವು ಮೆಚ್ಚತಕ್ಕದ್ದೇ! ಈ ದೈನ್ಯದಲ್ಲಿ ಅಹಂ... ರದ ಲೇಶಮಾತ್ರ ಸ್ಪರ್ಶವೂ ಇಲ್ಲ. ಅವರ ಶ್ರೀ... ಮನಸ್ಸು ಕುರಿತಾದ ಭಕ್ತಿಯು ವಿನಯ, ಸೌಶೀ... ಹಾಗೂ ನಮ್ರತೆಗಳಿಂದ ಕೂಡಿದೆ. ಇದರಿಂ... ಯಾವುದೇ ಉಪಾಸಕನು ಇವರೊಂದಿಗೆ ಸಾಂ... ದಾಯಿಕ ಭೇದಭಾವವನ್ನು ಹೊಂದಿಲ್ಲ.

ಯಾಮುನರು ಹೇಳುವುದೇನೆಂದರೆ,

'ಪರಮ ಶ್ರೇಷ್ಠನೂ, ಮರ್ಯಾದಾ ಪುರುಷೋತ್ತಮನೂ ಆದ ಭಗವಾನ್ ಶ್ರೀರಾಮನೆ! ಯೋಗಿಗಳಲ್ಲಿ ಶ್ರೇಷ್ಠರಾದ ಶಿವ, ಬ್ರಹ್ಮ ಸನಕ - ಸನಂದನ ಇತ್ಯಾದಿ ಮುನಿಗಣಗಳಿಂದ ಉತ್ತಮೋತ್ತಮ ರೀತಿಯಲ್ಲಿ ಧ್ಯಾನಿಸಿ, ಸ್ಮರಿಸಿ, ಅಭಿನಂದಿಸಲ್ಪಡುವುದರಿಂದ ನಿನ್ನ ಪ್ರಶಂಸೆಯನ್ನು ಮಾಡುವರು. ನಿನ್ನ ಅಂತಹ ಪಾದಚರಣಗಳ ಸೇವೆ ಮಾಡುವ ಅಧಿಕಾರವನ್ನು ಹೊಂದಲು ಇಚ್ಛಿಸುತ್ತೇನೆ. ನಿನ್ನ ಪಾರ್ಷದ ಹಾಗೂ ಪರಿಕರಗಳಲ್ಲಿ ಪ್ರವೇಶಿಸ ಲು ಇಷ್ಟಪಡುತ್ತೇನೆ.

ಓಹ್! ನಾನೆಷ್ಟು ನಿರ್ಲಜ್ಜನು! ಎಂತಹ ಉದ್ಧಟನು ನಾನು! ದುಸ್ಸಾಹಸಿ, ಅಪವಿತ್ರ ಹಾಗೂ ಕಠೋರ ಹೃದಯಿಯೂ ಆಗಿರುವೆನು. ನನ್ನಲ್ಲಿ ಹುದುಗಿರುವ ಕಾಮವಾಸನೆಯ ವ್ಯಕ್ತರೂಪವಾಗಿದೆ.

ಧಿಗ ಶುಚಿಮ ವಿನೀತಂ
ನಿರ್ಭಯಂ ಮಾಮಲಜ್ಜಂ
ಪರಮ ಪುರುಷಯೋಽಹಂ
ಯೋಗಿವರ್ಯಾಗ್ರಗಣ್ಯೈಃ
ವಿಧಿ ಶಿವ ಸನಕಾದ್ಯೈ
ರ್ಧ್ಯಾತು ಮತ್ಯಂತ ದೂರಂ
ತವ ಪರಿಜನ ಭಾವಂ
ಕಾಮಯೆ ಕಾಮವೃತ್ತಃ

ಇದರ ಮುಂದಿನ ಶ್ಲೋಕದಲ್ಲಿ ಅವರು ಹೀಗೆಂದು ಹೇಳಿಕೊಳ್ಳುತ್ತಾರೆ-

'ಪ್ರಭು! ಶ್ರೀರಾಮ! ನಾನು ಮಾಡಿರುವ ಅಪರಾಧಗಳಿಗೆ ಮಿತಿಯೇ ಇಲ್ಲ. ಭಯಂಕರ ಭವಸಾಗರದಲ್ಲಿ ಬಿದ್ದು ಮುಳುಗಿ ಹೋಗಿದ್ದೇನೆ. ನನ್ನನ್ನು ಉದ್ಧರಿಸುವವರು ಯಾರೂ ಇಲ್ಲ. ಆದರೆ ನಾನು ಒಂದಲ್ಲ ಒಂದು ರೀತಿಯಲ್ಲಿ ನಿನಗೆ ಶರಣಾಗಿ, ನಿನ್ನನ್ನೇ ಸ್ಮರಿಸುತ್ತಿದ್ದೇನೆ. ನೀನು ಕೇವಲ ನಿನ್ನ ಕೃಪೆಯಿಂದಷ್ಟೆ ನನ್ನನ್ನು ಉದ್ಧರಿಸಬಲ್ಲೆ, ನಿನ್ನವನನ್ನಾಗಿ ಮಾಡಿಕೊ! ಕೃಪೆ ಮಾಡಿ ನಿನ್ನವನನ್ನಾಗಿಯೇ ಮಾಡಿಕೊಳ್ಳದೇಕೆಂದು ಒತ್ತಾಯಿಸುತ್ತೇನೆ-

ಅಪರಾಧ ಸಹಸ್ರಭಾಜನಂ
ಪತಿತಂ ಭೀಮ ಭವಾರ್ಣವೋದರೇ
ಅಗತಿಂ ಶರಣಾಗತಂ ಹರೇ
ಕೃಪಯಾ ಕೇವಲ ಮಾತ್ಮಸಾತ್‌ಕುರು

ನಿಜಹೇಳಬೇಕೆಂದರೆ 'ಈ ಜಗತ್ತಿನಲ್ಲಿ ಸಾರಯುಕ್ತ ವಸ್ತುವೆಂದರೆ ಸತ್ಸಂಗ ಒಂದೇ ಆಗಿದೆ. ಎಲ್ಲ ಜೀವಿಗಳ ಒಳ್ಳೆಯದು ಮಾಡುವಿಕೆಗಳ, ಸ್ವತಃ ಅಭ್ಯುದಯಗೊಳಿಸುವ, ಸಂಪೂರ್ಣ ಶ್ರೇಯಸ್ಸನ್ನು ನೀಡುವ' ಅಂಶವೇ ಪರಮಾತ್ಮನು.

ಈ ವಿಚಾರವನ್ನು ಯಾಮುನರು ಈ ಪುಟ್ಟ ಸ್ತೋತ್ರದಲ್ಲಿ ಅನೇಕ ಕಡೆಗಳಲ್ಲಿ ಸಾಂಕೇತಿಕವಾಗಿ ಪ್ರಸ್ತಾಪಿಸಿದ್ದಾರೆ. ಆದರೆ ಒಂದೆರಡು ಕಡೆ ಇದು ಉತ್ಪ್ರೇಕ್ಷೆರೂಪವನ್ನೂ ಪಡೆಯುವುದುಂಟು-

'ಹೇ ಪ್ರಭೋ! ನನ್ನೊಡೆಯ! ನಿನ್ನ ಭಕ್ತರ, ಉಪಾಸಕರ ಹಾಗೂ ಸಂತರ ಮನೆಗಳಲ್ಲಿ ನಾನು ಕ್ರಿಮಿಯಾಗಿ ಜನ್ಮ ತಳೆದರೂ ಪರವಾಯಿಲ್ಲ. ಅದು ನನಗೆ ತುಂಬಾ ಸಂತೋಷ ನೀಡುವ ವಿಷಯ ವಾಗಿರುತ್ತದೆ. ಆದರೆ ದೂರೆ ಕಡೆಗಳಲ್ಲಿ ಭಕ್ತ, ಸಂತ, ಯೋಗಿಗಳ ಸಂಗವಿಲ್ಲದಿದ್ದಲ್ಲಿ, ನಾನು ಚತುರ್ಮುಖ ಬ್ರಹ್ಮನಾಗುವ ಅಗತ್ಯ ಬಂದರೂ, ಆ ಸ್ಥಾನ ನನಗೆ ಒಪ್ಪಿಗೆಯಿಲ್ಲ, ಅದನ್ನು ನಾನು ಸ್ವೀಕರಿಸಲೂ ಸಿದ್ಧನಿಲ್ಲ. ಅಂತಹ ಜನ್ಮವನ್ನು ನೀಡದೇಡ.

ತವ ದಾಸ್ಯ ಸುಖೈಕ ಸಂಗಿನಾಂ
ಭವನೇಷ್ವಸ್ತ್ವಪಿ ಕೀಟ ಜನ್ಮಮೇ
ಇತರಾವಸಥೇಷು ಮಾಸ್ಮ ಭೂದಪಿ
ಮೇ ಜನ್ಮ ಚತುರ್ಮುಖಾತ್ಮನಾ

ಶ್ರೀರಾಮನನ್ನು ಪ್ರಾರ್ಥಿಸುತ್ತಾ ಹೀಗೆಂದು ಆತನಲ್ಲಿ ಬಿನ್ನವಿಸಿಕೊಳ್ಳುವರು-

'ಹೇ ಪ್ರಭು! ಈ ಪ್ರಪಂಚದಲ್ಲಿ ನನ್ನವರೆನ್ನುವವರು ಯಾರೂ ಇಲ್ಲ. ಆದರೆ ಕೇವಲ ನೀನು ಮಾತ್ರ ನನ್ನ ತಂದೆ, ತಾಯಿ, ಪ್ರಿಯತಮ, ಮಗ, ಮಿತ್ರ, ಸೇವಕ, ನೆಂಟ ಹಾಗೂ ಗುರುವಾಗಿರುವೆ. ಈ ಪ್ರಪಂಚದಲ್ಲಿನ ಏಕಮಾತ್ರ ಆಶ್ರಯ ನೀನೇ ಆಗಿರುವೆ. ನಿಜ ಹೇಳಬೇಕೆಂದರೆ ನೀನು ನನಗಷ್ಟೇ ಅಲ್ಲ, ಎಲ್ಲ ಜೀವಿಗಳಿಗೂ ದೇಕಾದವನಾಗಿರುವೆ. ತತ್ವಶಃ ಎಲ್ಲರಲ್ಲೂ ನೀನು ನೆಲೆಸಿರುವೆ. ಅಂತೆಯೇ ನಾನೂನು ನಿನ್ನವನ್ನೇ ಆಗಿರುವೆನು. ನಿನ್ನ ಸೇವಕನೂ ಆಗಿರುವೆ. ನಿನ್ನ ಆಶ್ರಯದಲ್ಲಿರುವವನಾಗಿರುವೆ. ನಿನ್ನಲ್ಲಿ ನಾನು ಶರಣು ಹೊಂದಿದ್ದೇನೆ. ನಿನ್ನ ಮುಖಾಂತರ ಪಾಲಿಸಲ್ಪಡಲು ಯೋಗ್ಯನಾಗಿರುವವನಾಗಿದ್ದೇನೆ. ನಿನ್ನಿಂದ ರಕ್ಷಿಸಲ್ಪಡದೇಕಾದವನಾಗಿರುವೆ. ನೀನೇ ನನಗೆ ಏಕಮಾತ್ರ ಗತಿಯಾಗಿರುವೆ. ಆದುದರಿಂದ ನೀನೇ ನನ್ನನ್ನು ಸಾಕಬೇಕು. ನಿನ್ನ ಆಶ್ರಯದಲ್ಲಿ ನನ್ನನ್ನು ತೆಗೆದುಕೊಂಡು ನನ್ನನ್ನು ಉದ್ಧರಿಸು ದೇವ!

ಪಿತಾ ತ್ವಂ ಮಾತಾ ತ್ವಂ
ದಯಿತ ತನಯಸ್ತ್ವಂ ಪ್ರಿಯಸುಹೃತ್
ತ್ವಮೇವ ತ್ವಂ ಮಿತ್ರಂ
ಗುರುರಸಿ ಗತಿಶ್ಚಾಸಿ ಜಗತಾಮ್
ತ್ವದೀಯಸ್ತ್ವದ್ ಭೃತ್ಯಸ್ತವ
ಪರಿಜನಸ್ತ್ವದ್ ಗತಿರಹಂ
ಪ್ರಪನ್ನಶ್ಚೈ ಸತ್ಯಹಮಪಿ
ತವೈವಾಸ್ಮಿಹಿ ಭರಃ

ಆಚಾರ್ಯ ಯಾಮುನರು ಶ್ರೀರಾಮನ ಬಗೆಗೆ ಹೊಂದಿರುವ ಅನನ್ಯ ಆಶ್ರಯತೆ, ಅನನ್ಯ ನಿರ್ಭರತೆ ಹಾಗೂ ಅನನ್ಯ ಭಕ್ತಿ ನಿಷ್ಠೆಯ ಪರಿಚಯವನ್ನು ಈ ಶ್ಲೋಕವು ನೀಡುತ್ತದೆ

ಯಾಮುನರಲ್ಲಿನ ಈ ಶ್ರೀರಾಮಭಕ್ತಿಯು ವಂಶಪಾರಂಪರ್ಯವಾದುದು, ರಕ್ತಗತವಾದುದು. ಇವರ ತಾತನವರಾದ ನಾಥಮುನಿಗಳು ಶ್ರೀರಾಮನ ಅನನ್ಯ ಭಕ್ತರು. ತಮ್ಮ ಅಂತ್ಯದಿನಗಳಲ್ಲಿ ಶ್ರೀರಾಮನನ್ನು ಸೀತಾ ಲಕ್ಷ್ಮಣ ಹನುಮತ್ಸಮೇತ ದರ್ಶಿಸಿದ್ದರೆಂದು ಪ್ರತೀತಿ. ತಮ್ಮ ಮನೆಯ ಎದುರುಗಡೆ ಬೇಡರ ವೇಷದಲ್ಲಿ ಶ್ರೀರಾಮನು ಹಾದು ಹೋದುದನ್ನು ಕಣ್ಣಾರೆ ಕಂಡ ನಾಥಮುನಿಗಳು ಆತನನ್ನೆ ಹಿಂಬಾಲಿಸಿ, ಆತನ ಅಂತರ್ಧಾನದಲ್ಲೆ ತಾವೂ ಪ್ರಾಣತ್ಯಾಗ ಮಾಡಿ, ವೈಕುಂಠವಾಸಿಗಳಾದಂತಹ ಹಿರಿಯ, ಪುಣ್ಯಜೀವಿಗಳು. ತಮ್ಮ ಯೋಗಶಕ್ತಿಯಿಂದ ಶ್ರೀರಾಮನ ಪಾದಾರವಿಂದಗಳ ದರ್ಶನ ಭಾಗ್ಯವನ್ನು ಪಡೆದುದೇ ಅಲ್ಲದೆ ಅವನ್ನು ಸದಾ ಸ್ಮರಿಸುತ್ತಲೇ ದೈವಾಧೀನರಾದುದು ಒಂದು ಅಪರೂಪ ಪ್ರಸಂಗ.

ಅಂತಹ ಪರಂಪರೆಯಲ್ಲಿ ಬಂದವರೇ ಅಲ್ಲದೆ ತಾತನವರ ರಾಮಭಕ್ತಿಯನ್ನು ಸ್ವತಃ ಕಂಡು ಅನುಭವಿಸಿದ ಯಾಮುನರ ಎಳೆಯ ಮನಸ್ಸಿನ ಮೇಲೆ ಅಂತಹ ಶ್ರೀರಾಮಭಕ್ತಿಯು ಗಾಢವಾದ ಪ್ರಭಾವ ಬೀರಿದುದೇ ಅಲ್ಲದೆ ಆ ಭಕ್ತಿಯಲ್ಲೆ ತಮ್ಮನ್ನು ತಾವು ಮರೆಯುವಂತೆ ಮಾಡಿದುದು ಶ್ರೀ ವೈಷ್ಣವತ್ವದ ಒಂದು ವಿಶೇಷವೆಂದೇ ಹೇಳಬೇಕು.

ಅಂತಹ ಶ್ರೀರಾಮಭಕ್ತಿಯಿಂದಲೇ, ಶ್ರೀರಾಮನ ಅನುಜನ ಹೆಸರನ್ನು ಹೊಂದಿರುವ ರಾಮಾನುಜರ ಮೇಲೆ ಯಾಮುನರು ಗಾಢವಾದ ಪ್ರೀತಿ, ನಂಬಿಕೆಗಳನ್ನು ಇರಿಸಿ, ವಿಶಿಷ್ಟಾದ್ವೈತದ ನವೋದಯಕ್ಕೆ ಅಡಿಗಲ್ಲು ಹಾಕಿ, ಪಾಮರ ಕೋಟಿಗೆ ಬಹಳಷ್ಟು ಉಪಕಾರ ಮಾಡಿದ್ದಾರೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಶ್ರೀರಾಮನ ಅನೇಕ ಗುಣಗಳನ್ನು ಯಾಮುನರು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಓರ್ವ ಆದರ್ಶ ಸಂತ ಹಾಗೂ ಶ್ರೀರಾಮನ ಭಕ್ತ ಎಂಬುದನ್ನು ಸಾರ್ಥಕಪಡಿಸಿಕೊಂಡರು.

(ಏಪ್ರಿಲ್ 1995 ಸಪ್ತಗಿರಿ)

---ವಿದ್ವಾನ್ 'ರಘುಸುತ'.

✪✪✪✪✪

# ತಿರುಮಲೆ ತಿರುಪತಿ ದೇವಸ್ಥಾನಗಳು -- ತಿರುಪತಿ.



## ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿಪನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ ಪ್ರಶಸ್ತ ವರವಾಗಿವೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿವೆ. ಇದರ ಹೆಸರು--

### ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೨೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಹಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:-** ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.

೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.

ತಿರುಮಲೆಯ ಅರಣ್ಯನಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ:

ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ.



ಕಾರ್ಯನಿರ್ವಹಣಾಧಿಕಾರಿ

# ಸ್ತೋತ್ರ ರತ್ನ

---ಶ್ರೀ ಕಂದಾಡೈ ಕೇಶವನ್.

ಶ್ರೀ ಯಾಮುನಾಚಾರ್ಯ ವಿಶಿಷ್ಟಾದ್ವೈತ ಮತವನ್ನು ಸರ್ವತೋಮುಖವಾಗಿ ಹರಡಲು ಯತ್ನಿಸಿದವರಲ್ಲಿ ಪ್ರಥಮ ಆಚಾರ್ಯರು, ಶ್ರೀ ರಾಮಾನುಜಾಚಾರ್ಯರ ಪರಮ ಗುರುಗಳು. ಕ್ರಿ.ಶ. ೧೦ನೆಯ ಶತಮಾನದಲ್ಲಿ ಮೆರೆದ ಭಕ್ತ ಶಿರೋಮಣಿ ಇವರು. ಇವರು ರಚಿಸಿದ "ಸಿದ್ಧಿತ್ರಯ, ಗೀತಾರ್ಥ ಸಂಗ್ರಹ, ಸ್ತೋತ್ರರತ್ನ ಮುಂತಾದ ಅಪೂರ್ವ ಗ್ರಂಥಗಳು ಪಂಡಿತ ಪಾಮರನ್ನು ಮೆಚ್ಚಿಸಿವೆ. ಬಾಲ್ಯದಲ್ಲೇ ಇವರಲ್ಲಿ ಕವಿತಾಧೋರಣೆ ಬೇರೂರಿತ್ತು. ಇವರ ಗ್ರಂಥಗಳಲ್ಲಿ ಶಬ್ದ ಸೌಷ್ಟವ, ಪ್ರತಿಭೆಯ ಸಂಪತ್ತು, ತತ್ವವನ್ನು ಹೇಳುವ ಜಾಣ್ಮೆ ಪಾಂಡಿತ್ಯ ಪ್ರದರ್ಶನದ ವಿನ್ಯಾಸ, ಮಿಗಿಲಾಗಿ ಈಶ್ವರನಲ್ಲಿ ತೋರುವ ನಿರ್ಹೇತುಕ ಪ್ರೇಮಪ್ರವಾಹ ಅಪಾರವಾಗಿವೆ. ಭಗವತ್ಸೇವೆಯಲ್ಲಿ ತಮ್ಮ ಇಹಲೋಕದ ಜೀವನವನ್ನು ಕಳೆದು ಧನ್ಯರಾದ ನಾಥಮುನಿಗಳು ಇವರ ಪಿತಾಮಹರು, ಯಾಮುನಾಚಾರ್ಯ ಜನನ ಮಧುರೆ ಜಿಲ್ಲೆಯಲ್ಲಿ. ಈಶ್ವರಾನುಗ್ರಹದಿಂದ ಇವರಿಗೆ ೧೦ ನೆಯ ವಯಸ್ಸಿನಲ್ಲಿ ಭಾಷ್ಯಾಚಾರ್ಯರೆಂಬ ಗುರುಗಳು ದೊರಕಿದರು. ಆ ಗುರುಗಳ ಅನುಗ್ರಹದಿಂದ ಎಲ್ಲ ವೇದ ಉಪನಿಷತ್ತುಗಳನ್ನು ಮನನ ಮಾಡಿದರು. ಹುಟ್ಟುಗುಣವಾಗಿ ತಮ್ಮಲ್ಲಿ ನೆಲೆಸಿದ್ದ ಭಕ್ತಿ ಜ್ಞಾನಕ್ಕೆ ಗುರುಕೃಪೆಯೂ ಒದಗಿ ಬಂತು. ಇವರ ಸುಪ್ತಜ್ಞಾನ ಲೋಕಕ್ಕೆ ತಿಳಿಯುವ ಸುಯೋಗವೂ ಒದಗಿಬಂತು. ಆಗ್ಗೆ ಪಾಂಡ್ಯರಾಜ್ಯದಲ್ಲಿ ವೀರಮಣಿಯೆಂಬ ಧರ್ಮಿಷ್ಟನಾದ ರಾಜ ರಾಜ್ಯವಾಳುತ್ತಿದ್ದನು, ಆತನಿಗೆ ತಕ್ಕಂತಹ ಸದ್ಗುಣಿಯಾದ ಹೆಂಡತಿ ವಿದ್ಯಾವತಿ. ಕೋಲಾಹಲನೆಂಬ ಪಂಡಿತಗುರು ಅವನ ಆಸ್ಥಾನದಲ್ಲಿ ಮೆರೆಯುತ್ತಿದ್ದನು. ಆಕಾಲದಲ್ಲಿ ವಾಗ್ವಾದದಲ್ಲಿ ಗೆದ್ದ ಪಂಡಿತ ಗುರುವಿಗೆ, ಸೋತ ಪಂಡಿತರು ಗೌರವ ಧನವನ್ನು ಪ್ರತಿವರ್ಷವೂ ಅರ್ಪಿಸಬೇಕಾಗಿತ್ತು. ಒಂದು ದಿನ ಭಾಷ್ಯಾಚಾರ್ಯರು ಆಶ್ರಮದಲ್ಲಿರಲಿಲ್ಲ. ಕೋಲಾಹಲನ ಕಡೆಯವರು ಗೌರವ ಧನವನ್ನು ವಸೂಲಿ ಮಾಡಲು ಆಶ್ರಮಕ್ಕೆ ಬಂದರು. ಇದನ್ನು ಕೇಳಿದ ಯಾಮುನಾಚಾರ್ಯರು ಕೋಪಗೊಂಡು ತಮ್ಮನ್ನು ವಾದದಲ್ಲಿ ಸೋಲಿಸುವವರಿಗೂ ಗೌರವ ಧನವನ್ನು ನೀಡುವುದಿಲ್ಲವೆಂದು ಹೇಳಿ ಕಳುಹಿಸಿದರು. ಇದನ್ನು ಕೇಳಿದ ಕೋಲಾಹಲನು ಕುಪಿತನಾಗಿ ನಡೆದ ಸಂಗತಿಯನ್ನು ರಾಜನಾದ ವೀರಮಣಿಗೆ ತಿಳಿಸಲು, ರಾಣಿಯ ಆದೇಶದಂತೆ ಕೋಲಾಹಲನಿಗೂ ಯಾಮುನಾಚಾರ್ಯರಿಗೂ ವಾಗ್ಯುದ್ಧ ನಡೆಯುವಂತೆ ಸಭೆಯನ್ನು ಕರೆದರು. ಒಬ್ಬಬಾಲಕನಿಗೂ, ಒಬ್ಬದೊಡ್ಡಪಂಡಿತರಾಜನಿಗೂ ವಾಗ್ವಾದ ನಡೆಯುವುದನ್ನು ಕೇಳಿ ಎಲ್ಲರೂ ಆಸ್ಥಾನದಲ್ಲಿ ಸೇರಿದರು. ಯಾಮುನರ ಮುಖವರ್ಚಸನ್ನು ಕಂಡು ರಾಣಿ ವಿದ್ಯಾವತಿ ಕೋಲಾಹಲರು ಸೋತರೆ ಮಧುರೆ ಜಿಲ್ಲೆಯ ಒಂದು ಸಂಸ್ಥಾನಕ್ಕೆ ಯಾಮುನರನ್ನು ಅಧಿಪತಿಯನ್ನಾಗಿ ನೇಮಿಸುವೆನಂತಲೂ ಪ್ರತಿಜ್ಞೆ ಮಾಡಿದಳು. ಯಾಮುನರು ವಿನೀತಭಾವದೊಡನೆ ಕೋಲಾಹಲರನ್ನು ಕುರಿತು ಅವರ ಇಚ್ಛೆಯಂತೆ ತಾವು ಮೂರು ಪ್ರಶ್ನೆಗಳನ್ನು ಹಾಕುವುದಾಗಿಯೂ ಅವುಗಳನ್ನು ನಿರಾಕರಿಸುವುದು ಪ್ರತಿಪಕ್ಷೀಯ ಧರ್ಮವೆಂತಲೂ ತಿಳಿಸಿ, ಮೊದಲನೆಯದಾಗಿ 'ಕೋಲಾಹಲರ ತಾಯಿ ಬಂಜೆಯಲ್ಲ' ಎಂದರು. ಇವನ್ನು ನಿರಾಕರಿಸಬೇಕು ಅಂದರೆ ಕೋಲಾಹಲರ ತಾಯಿ ಬಂಜೆ ಎಂಬುದಾಗಿ ಪ್ರತಿಪಾದಿಸಬೇಕು. ಎರಡನೆಯದಾಗಿ 'ರಾಜನು ಧರ್ಮಾತ್ಮ' ಇದನ್ನು ನಿರಾಕರಿಸಬೇಕು. ಮೂರನೆಯದಾಗಿ 'ರಾಣಿಯು ಪತಿವ್ರತೆ' ಅಂದರೆ ರಾಣಿಯು ಪತಿವ್ರತೆಯಲ್ಲ ಎಂಬುದಾಗಿ ಸ್ಪಷ್ಟಪಡಿಸಬೇಕು. ಈ ಮೂರು ವಿಷಯಗಳನ್ನು ಕೋಲಾಹಲರು ನಿರಾಕರಿಸಿದರೆ ತಾವು ಅವರ ಊಳಿಗವನ್ನು ಮಾಡುವುದಾಗಿ ಬಾಲಕ ಯಾಮುನರು ಸವಾಲು ಹಾಕಿದರು. ಇವರ ಒಗಟನ್ನು ಕಂಡ ಪಂಡಿತ ಪಾಮರರು ಮೂಕರಾದರು. ಕೋಲಾಹಲರು ಈ ಸಮಸ್ಯೆಯನ್ನು ಬಿಡಿಸಲಾರದೆ ಹೋದರು. ವಿದ್ಯಾವತಿಗೆ ಉತ್ತರಗಳನ್ನು ಕೇಳುವ ತವಕ, ಬಯಕೆ. ಅನುಭವವೇದ್ಯವಾದ ಸಂತೋಷ. ವಿದ್ಯಾವತಿಯ ಆದೇಶದಂತೆ ಯಾಮುನರು ಸ್ವತಃ ತಾವೇ ತಮ್ಮವಾದವನ್ನು ಮುಂದುವರಿಸಿದರು.

ಒಬ್ಬ ಮಗ ಮಗನಲ್ಲವೆಂಬ ಶಾಸ್ತ್ರದ ಆಧಾರದಿಂದ ಕೋಲಾಹಲನ ತಾಯಿ ಒಬ್ಬ ಮಗನನ್ನು ಹೊಂದಿದ್ದರೂ ಬಂಜೆಯೆಂದೇ ಲೆಕ್ಕ. ನಮ್ಮ ರಾಜನು ಮಹಾ ಪುಣ್ಯಾತ್ಮ ಅವನು ಹೇಗೆ ಪಾಪಾತ್ಮನಾಗುತ್ತಾನೆ ಎಂದರೆ "ರಾಜಾ ರಾಷ್ಟ್ರಕೃತಂ ಪಾಪಂ" ಎಂಬುವಂತೆ ರಾಜನು ರಾಜ್ಯದಲ್ಲಿ ಆಗುವ ಪಾಪ ಕಾರ್ಯಗಳಿಗೆ ಹೊಣೆಯಾಗಿದ್ದಾನೆ. ಆದ್ದರಿಂದ ಅವನು ಪುಣ್ಯಾತ್ಮನಲ್ಲ ಎಂಬುದಾಗಿ ಯಾಮುನರು ವಿವರಣೆ ಕೊಟ್ಟರು. ಮೂರನೆಯ ವಾಕ್ಯ "ರಾಜಪತ್ನೀ ಪತಿವ್ರತಾ" ಈ ಮಾತನ್ನು ಹೇಗೆ ಪೂರೈಸುವರೆಂದು ರಾಣಿವಾಸದವರು ಎಲ್ಲರೂ ತವಕದಿಂದಿರುವಾಗ, "ಹೇ ರಾರ್ಜ ಪ್ರತಿಯೊಬ್ಬ ಹೆಂಗಸೂ ಮದುವೆಯಲ್ಲಿ ಮುಂಚೆ ಅಗ್ನಿಗೂ ವರುಣನಿಗೂ ತರುವಾಯು ಇಂದ್ರನಿಗೂ ಧಾರೆ ಎರೆಯಲ್ಪಟ್ಟ ಮೇಲೆ ಗಂಡನಿಗೆ ಪತ್ನಿಯಾಗಿ ಬರುವ ಸಂಪ್ರದಾಯ ಇರುವಾಗ ಯಾವ ಹೆಂಗಸು ಪತಿವ್ರತೆಯೆಂದು ಹೇಳಲು ಸಾಧ್ಯ" ಎಂಬುದಾಗಿ ಉತ್ತರ ಕೊಡಲು ಮಹಾರಾಣಿಯೂ ಯಾಮುನರ ಅದ್ಭುತ ಪಾಂಡಿತ್ಯವೈಖರಿಯನ್ನು ಕಂಡು ಸಭೆಗೆ ಬಂದು ಯಾಮುನರನ್ನು ತಬ್ಬಿಕೊಂಡು "ಎನ್ನೈ ಆಳ ವಂದೀರೋ" - ನಮ್ಮನ್ನು ಕಾಪಾಡಲು ಬಂದ ಗುರುಗಳೇ ಎಂಬುದಾಗಿ ಸಂಬೋಧಿಸಲು ಯಾಮುನರಿಗೆ ಅಂದಿನಿಂದ ಆಳವಂದಾರ್ ಎಂಬುವ ಅಂಕಿತ ನಾಮವು ಬಂತು.

ಮಾತಿನಂತೆ ರಾಣಿಯು ಯಾಮುನರನ್ನು ಮಧುರೆಯ ಜಿಲ್ಲೆಯ ಒಂದು ಪ್ರಾಂತಕ್ಕೆ ಸಾಮಂತರಾಜರನ್ನಾಗಿ ನೇಮಿಸಿದಳು. ಇದು ಇವರ ಬಾಲ್ಯದಲ್ಲಿ ತೋರಿದ ಪ್ರತಿಭೆಗೆ ತಕ್ಕಂತಹ ಪದವಿ. ಕೆಲವು ಕಾಲ ಗೃಹಸ್ಥರಾಗಿ ಮಹದೈಶ್ವರ್ಯದಲ್ಲಿ ಮಿಂದು ಭೋಗಿಗಳಾಗಿ ಮೆರೆಯುತ್ತಿದ್ದರು.

ರಾಜ್ಯಾದಿಧನಕನಕ ಸಂಪತ್ತುಗಳಿದ್ದರೂ ಯಾಮುನಾಚಾರ್ಯರಲ್ಲಿ ಏನೋ ಕೊರತೆ ಕಾಣಬರುತ್ತಿತ್ತು. ಅವರ ಹೃದಯದಲ್ಲಿ ಯಾವುದೋ ಅಸ್ಪಷ್ಟ ಕೊರತೆ ಎದ್ದು ಕಾಣುತ್ತಿತ್ತು. ಮನಕ್ಕೆ ಗೋಚರವಲ್ಲದ ಯಾವುದೋ ಸಂದೇಹ, ಒಮ್ಮೊಮ್ಮೆ ಸಂಶಯ ನಿವೃತ್ತಿಗಾಗಿ ಸೆಣಸಾಟ ನಡೆಯುತ್ತಲೇ ಇದ್ದವು. ಇವರಿಗೆ ದೇವರ ಅನುಗ್ರಹವೂ ಒದಗಿ ಬರುವ ಕಾಲವು ಸನ್ನಿಹಿತವಾಯಿತು. ಇವರ ಪಿತಾಮಹರಾದ ನಾಥಮುನಿಗಳ ಶಿಷ್ಯರಾದ ಮನಕ್ಕಾಲ್ ನಂಬಿ (ರಾಮಮಿಶ್ರರು) ಯಾಮುನಾಚಾರ್ಯರ ದರ್ಶನವನ್ನು ಹೊಂದಲು ಪ್ರಯತ್ನಿಸಿ ವಿಫಲರಾದರು. ಪ್ರತಿದಿನ ರಾಜನ ಅಡಿಗೆಗೆ ವಿಷ್ಣುಕಾಂತಿಯನ್ನು ಒದಗಿಸಲು ಉಪಕ್ರಮಿಸಿದರು. ಒಂದು ದಿನ ರಾಮಮಿಶ್ರರು ವಿಷ್ಣುಕಾಂತಿಯನ್ನು ಅಡಿಗೆಗೆ ಒದಗಿಸಲು ತಪ್ಪಿದರು. ಆದಿನ ಏಕೆ ವಿಷ್ಣುಕಾಂತಿಯನ್ನು ಉಪಯೋಗಿಸಲಿಲ್ಲವೆಂದು ಯಾಮುನರು ಕೇಳಿದರು. ಅಡಿಗೆ ಭಟ್ಟರು ಪ್ರತಿದಿನವೂ ಫಲಾಪೇಕ್ಷೆಯಿಲ್ಲದೆ ವಿಷ್ಣುಕಾಂತಿಯನ್ನು ತರುತ್ತಿದ್ದ ವ್ಯಕ್ತಿ ಅಂದು ತರಲಿಲ್ಲವೆಂದು ನಿವೇದಿಸಿದರು. ಯಾಮುನರಿಗೆ ಆ ವ್ಯಕ್ತಿ ಯಾರೆಂದು ಸಂಶಯಮೂಡಿತು. ಮಾರನೆಯದಿನ ಯಾಮುನರ ಆದೇಶದಂತೆ ರಾಮ



## ಶ್ರೀ ವೇಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮ[illegible]ತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾ[illegible] ಕೇಂದ್ರವನ್ನು ನೆಲೆಗೊಳಿ[illegible] ಅದನ್ನು ಸ್ವಾಮಿ [illegible] ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್[illegible] ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊ[illegible]ವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರ[illegible] ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀ[illegible]ಪಾದೇಯವೂ ಭವ್ಯವೂ ಆದ ಸಂ[illegible]ಶವನ್ನು ಪ್ರಸಾರಮಾಡು[illegible]ದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ [illegible]ಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ, ಧರ್ಮ, ಸಂಗೀತ[illegible]ದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋ[illegible] ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇದ್ರಗ್ರಂಥಾಲಯ [illegible] ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ [illegible]ಗಳನ್ನು ಪ್ರ[illegible]ಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ [illegible]ವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯ[illegible] ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದ[illegible] ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹ[illegible]ವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.



ಮಿಶ್ರರನ್ನು ಅರಮನೆಗೆ ಕರೆತಂದರು. ರಾಮಮಿಶ್ರರು ತಾವು ಇಷ್ಟು ದಿನ ಕಾದಿದ್ದು ಯಾಮುನರ ಪಿತಾಮಹರಾದ ನಾಥಮುನಿಗಳು ಬಿಟ್ಟು ಹೋದ ಕುಲಧನವನ್ನು ಒಪ್ಪಿಸಲು ಎಂಬುವುದಾಗಿ ಉತ್ತರ ಕೊಟ್ಟರು. ಕ್ರಮವಾಗಿ ಕೆಲವು ದಿನಗಳು ಯಾಮುನರಿಗೆ ತತ್ತ್ವೋಪದೇಶಗಳನ್ನಿತ್ತು ಅವರ ಕುಲಧನವನ್ನು ತೋರುವೆನೆಂದು ಹೇಳಿ ಅವರನ್ನು ಶ್ರೀರಂಗಕ್ಕೆ ಕರೆತಂದು "ಶ್ರೀರಂಗನಾಥ ದೇವರನ್ನು" ತೋರಿಸಿ, ಇದೇ ನಿಮ್ಮ ತಾತಂದಿರು ಬಿಟ್ಟು ಹೋದ ಕುಲಧನವೆಂದು ಹೇಳಲು ನಿರ್ಹೇತುಕ ಪ್ರೇಮವು ಅವರನ್ನು ಆವರಿಸಿತು. ರಂಗನಾಥನ ದಿವ್ಯ ಮಂಗಲ ವಿಗ್ರಹವನ್ನು ನೋಡುತ್ತಾ ಆತ್ಮ ಪರಿವರ್ತನೆಗೊಂಡಿತು. ಈಶನಲ್ಲಿ ಅನುರಾಗ ಉದಯಿಸಿತು. ಭಕ್ತಿಯಿಂದ ರೋಮಾಂಚನಗೊಂಡು ಗದ್ಗದ ಸ್ವರದಿಂದ ಆನಂದಭಾಷ್ಪವನ್ನು ಸುರಿಸುತ್ತಾ ಶ್ರೀರಂಗದಲ್ಲಿ ತಮ್ಮ ಮಿಕ್ಕ ಜೀವನವನ್ನು ಕಳೆಯಲು ನಿರ್ಧರಿಸಿದರು. ಅವರಿಂದ ರಚಿತವಾದ ಸ್ತೋತ್ರರತ್ನವೆಂಬ ಕಾವ್ಯವು ಭಕ್ತಿ ಭಂಡಾರಕ್ಕೆ ಅಪೂರ್ವಕಾಣಿಕೆ. ಶ್ರೀ ರಾಮಾನುಜರು ಇವರ ಈ ಗ್ರಂಥದಿಂದ ಬಹಳ ಉಪಕೃತರಾಗಿದ್ದಾರೆ. ವಿಶಿಷ್ಟಾದ್ವೈತವನ್ನು ಪ್ರಚಾರಮಾಡಿದ ರಾಮಾನುಜರು ಯಾಮುನಾಚಾರ್ಯರ ಅಂತಿಮ ಆಸೆಯಾದ ಬಾದರಾಯಣರ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆದಿದ್ದೂ, ಪರಾಶರರ ಮಹಿಮೆಯನ್ನು ಪ್ರಚಾರಮಾಡಿದ್ದೂ, ಶ್ರೀಗೀತಾ ಭಾಷ್ಯವನ್ನು ಬರೆದಿದ್ದೂ ಚರಿತ್ರೆಯ ಅಂಶವಾಗಿವೆ. ಇವರ ಸ್ತೋತ್ರರತ್ನವು ವಿಶಿಷ್ಟಾದ್ವೈತ ಮತದವರನ್ನಲ್ಲದೆ ಎಲ್ಲಾಪಂಗಡಗಳ ಪಂಡಿತರನ್ನು ಸಂತೋಷಗೊಳಿಸಿದೆ. ಈ ಕಾವ್ಯಕ್ಕೆ ಅನೇಕರು ವ್ಯಾಖ್ಯಾನಗಳನ್ನು ಮಾಡಿದ್ದಾರೆ. ಇವರ ಶಬ್ದ ಮಾಧುರ್ಯಕ್ಕೆ ಅಲಂಕಾರಗಳ ಚಮತ್ಕಾರಕ್ಕೆ ಮನಸೋತ ಅಪ್ಪಯ್ಯದೀಕ್ಷಿತರು ತಮ್ಮ "ಕುವಲಯಾನಂದ" ವೆಂಬ ಅಲಂಕಾರ ಶಾಸ್ತ್ರಗ್ರಂಥದಲ್ಲಿ ಯಾಮುನರ ಕೆಲವು ಶ್ಲೋಕಗಳನ್ನು ಉದಾಹರಿಸಿದ್ದಾರೆ. ಪಂಡಿತರತ್ನ ಜಗನ್ನಾಥಕವಿಯೂ ಕೂಡ ಸ್ತೋತ್ರರತ್ನದ ಕೆಲವು ಶ್ಲೋಕಗಳನ್ನೂ ತಮ್ಮ "ರಸಗಂಗಾಧರ" ದಲ್ಲಿ ಉದಾಹರಿಸಿದ್ದಾರೆ. ಹೃಷೀಕೇಶದ ಶಿವಾನಂದಸ್ವಾಮಿಗಳು "ಆಳವಂದಾರ್" ಎಂಬ ಯಾಮುನರ ಜೀವಿತವನ್ನು ಕುರಿತು ಆಂಗ್ಲದಲ್ಲಿ ನಾಟಕವನ್ನು ಬರೆದಿದ್ದಾರೆ. ರಾಮಕೃಷ್ಣ ಪರಮಹಂಸರ ಶಿಷ್ಯರಾದ ಹಿಮಕೃಷ್ಣಾನಂದರು ಯಾಮುನರ ಸ್ತೋತ್ರ ರತ್ನವನ್ನು ಬಂಗಾಳಿಭಾಷೆಯಲ್ಲಿ ಭಾವಾನುವಾದ ಮಾಡಿದ್ದಾರೆ. ತಮಿಳಿನಲ್ಲಿ ಪೂರ್ವಾಚಾರ್ಯರಾದ ಪೆರಿಯ ಅಚ್ಚಾನ್ ಪಿಳ್ಳೆಯವರು ಈ ಸ್ತೋತ್ರರತ್ನಕ್ಕೆ ಸೊಗಸಾದ ಭಾಷ್ಯವನ್ನು ಬರೆದಿದ್ದಾರೆ. ವಿಶಿಷ್ಟಾದ್ವೈತಮತ ಪ್ರಸಾರಕರಲ್ಲಿ ಒಬ್ಬರಾದ ವೇದಾಂತ ದೇಶಿ

ಕರವರು ಸಂಸ್ಕೃತ ಭಾಷೆಯಲ್ಲಿ ಎಲ್ಲರನ್ನೂ ತಲೆ ದೂಗಿಸುವಂತಹ ವ್ಯಾಖ್ಯಾನ ಬರೆದಿದ್ದಾರೆ. ಅಂದಿನಿಂದ ಭಾರತೀಯ ಎಲ್ಲಾ ಭಾಷೆಗಳಲ್ಲಿ ಭಾಷಾನುವಾದವು ನಡೆದಿವೆ.

ಈ ಸ್ತೋತ್ರರತ್ನವು ಅರವತ್ತೈದು ಸುಂದರ ಶ್ಲೋಕಗಳ ಸಂಕಲನ.

ಮೊದಲನೆಯ ಶ್ಲೋಕದಲ್ಲಿ ತಮ್ಮ ತಾತಂದಿರಾದ ನಾಥಮುನಿಗಳನ್ನು ಸ್ಮರಿಸುತ್ತಾ ಸ್ತೋತ್ರರತ್ನವನ್ನು ಪ್ರಾರಂಭಮಾಡುತ್ತಾರೆ.

ನಮೋಽಚಿಂತ್ಯಾದ್ಭುತಾ ಕ್ಲಿಷ್ಟ
ಜ್ಞಾನ ವೈರಾಗ್ಯರಾಶಯೇ
ನಾಥಾಯ ಮುನಯೇಽಗಾಧ
ಭಗವದ್ಭಕ್ತಿ ಸಿಂಧವೇ

(ಜ್ಞಾನ ವೈರಾಗ್ಯ ಭಕ್ತಿಗಳು ಅಗಾಧವಾದ ಸಮುದ್ರದಂತೆ ಶ್ರೀನಾಥಮುನಿಗಳಲ್ಲಿ ಚಿಂತಿಸಲು ಅಸಾಧ್ಯವಾಗಿ ನೆಲೆಸಿರಲು ಅಂತಹ ಮಹಾಮಹಿಮೆಯುಳ್ಳ ನಾಥಮುನಿಗಳನ್ನು ವಂದಿಸುತ್ತೇನೆ) ಮುಂದೆ ನಾಲ್ಕು ಶ್ಲೋಕಗಳಲ್ಲಿ ಕ್ರಮವಾಗಿ ತಮ್ಮ ಪಿತಾಮಹರಾದ ನಾಥಮುನಿಗಳನ್ನೂ ವಿಷ್ಣುಪುರಾಣವನ್ನು ರಚಿಸಿದ ಪರಾಶರರನ್ನೂ, ಶ್ರೀ ವೈಷ್ಣವ ಸಂಪ್ರದಾಯಕ್ಕೆ ಪ್ರಥಮಾಚಾರ್ಯರಾದ ಪ್ರಪನ್ನ ಜನಕೂಟಸ್ಥರಾದ ಶ್ರೀನಮ್ಮಾಳ್ವಾರ್‌ರವರನ್ನುಸ್ತುತಿಸಿದ್ದಾರೆ.

ಏಳನೆಯ ಶ್ಲೋಕದಲ್ಲಿ ಭಗವಂತನ ಮಹಿಮೆ ಮಹಾಸಾಗರದಂತೆ ಅಪಾರವಾಗಿದೆ. ಸರ್ವಜ್ಞನೆಂದು ತಿಳಿದು ಮಂದಮತಿಯಾದ ನಾನು ಅವನ ಗುಣಗಳನ್ನು ಸ್ತೋತ್ರ ಮಾಡಲು ಉದ್ಯುಕ್ತನಾದೆ ನನಗೂ ಒಂದು ನಮಸ್ಕಾರವಿರಲಿ ಎಂಬುದಾಗಿ ಹೇಳಿಕೊಂಡಿದ್ದಾರೆ. ತಮ್ಮ ಈ ಪ್ರಯತ್ನವನ್ನು ಸಮರ್ಥಿಸಿಕೊಳ್ಳಲು-

ಯದ್ವಾಶ್ರಮಾವಧಿ
ಯಥಾಮತಿ ವಾಪ್ಯಶಕ್ತಃ
ಸ್ತೌಮ್ಯೇವಮೇವ
ಖಲು ತೇಪಿ ತದಾ ಸ್ತುವಂತಃ
ವೇದಾಶ್ಚ ತುರ್ಮುಖ
ಮುಖಾಶ್ಚ ಮಹಾರ್ಣವಾಂತಃ
ಕೋ ಮಜ್ಜತೋ ಅಣು
ಕುಲಾಚಲಯೋರ್ವಿಶೇಷಃ

ಎಂಬ ಶ್ಲೋಕದಲ್ಲಿ ಅಸಾಧ್ಯವಾದ ಕಾರ್ಯವನ್ನು ನಾನು ಕೈಗೊಂಡೆ, ಭಗವಂತನ ಸ್ತೋತ್ರಮಾಡುವುದೇ ಉಚಿತ. ಅವರವರ ಶಕ್ತಿಗಳಿಗನುಸಾರವಾಗಿ ಸ್ತೋತ್ರಮಾಡುವುದರಲ್ಲಿ ತಪ್ಪೇನಿದೆ, ವೇದಗಳೂ ಕೂಡ "ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂಬಂತೆ ಪರಮಾತ್ಮನ ಗುಣಗಳನ್ನು ಸಮಗ್ರವಾಗಿ ಸ್ತೋತ್ರಮಾಡಲು ಶಕ್ತಿಯಿಲ್ಲದೆ ಹೋಗಿರಲು, ಚತುರ್ಮುಖ ಬ್ರಹ್ಮ ಮುಂತಾದವರು ಕೂಡ ದೆಟ್ಟದಷ್ಟು ಸ್ತೋತ್ರ ಮಾಡಿದ್ದರೂ ಕೂಡ, ಭಗವಂತನ ಮಹಿಮಾರ್ಣವದಲ್ಲಿ ಮುಳುಗಿ ಹೋಗಿರುವುದು ಸಹಜವಷ್ಟೆ. ಒಂದು ಸಣ್ಣಕಲ್ಲು ಹಾಗೂ ಒಂದು ಮೈನಾಕ ಪರ್ವತವೂ ಸಮುದ್ರದಲ್ಲಿ ಮುಳುಗಿರುವಂತೆ ಪರಮಾತ್ಮನ ಮಹಿಮೆ ಎಂಬ ಸಾಗರದಲ್ಲಿ ಜ್ಞಾನಿಗಳೂ, ನಾನು ಮುಳುಗಿ ಹೋಗಿರುವುದರಲ್ಲಿ ವ್ಯತ್ಯಾಸವೇನಿದೆ ಎಂಬುದಾಗಿ ಹೇಳಿಕೊಂಡಿದ್ದಾರೆ.

ಸರ್ವದಾ ಸರ್ವಭಾವದಿಂದಲೂ ನಿಶ್ಚಿಂತನಾಗಿ ಈಶನನ್ನು ಉಪಾಸಿಸಿದರೆ ಅವನ ಕೃಪಾಕಟಾಕ್ಷವು ಭಕ್ತನ ಮೇಲೆ ಬೀಳುತ್ತದೆ ಎಂಬುವ ಸಾರ ಸ್ತೋತ್ರ ರತ್ನದಲ್ಲಿದೆ.

ಹತ್ತನೆಯ ಶ್ಲೋಕದಲ್ಲಿ ಜಗನ್ನಾಥನು ಆಶ್ರಿತರನ್ನು ಕಾಪಾಡುವುದು ಏನೂ ಆಶ್ಚರ್ಯವಲ್ಲ ಕಾರಣ ಅದು ಅವನ ಸಹಜಗುಣ ಎಂಬುದಾಗಿ ಹೇಳುತ್ತಾ

ನಾವೇಕ್ಷಸೇ ಯದಿ
ತತೋ ಭುವನಾನ್ಯಮೂನಿ
ನಾಲಂ ಪ್ರಭೋ ಭವಿತು
ಮೇವ ಕುತಃ ಪ್ರವೃತ್ತಿಃ
ಏವಂ ನಿಸರ್ಗ ಸುಹೃದಿ
ತ್ವಯಿ ಸರ್ವ ಜನ್ತೋಃ
ಸ್ವಾಮಿನ್ನ ಚಿತ್ರ ಮಿದ
ಮಾಶ್ರಿತ ವತ್ಸಲತ್ವಂ

ಮೇಲಾಗಿ ಈ ಶ್ಲೋಕದಲ್ಲಿ "ಓಂ ಅಥಾತೋ ಬ್ರಹ್ಮ ಜಿಜ್ಞಾಸಾ" ಎಂಬ ಶ್ರೀ ಭಾಷ್ಯದ ಸೂತ್ರದ ಅರ್ಥವೂ, ತೈತ್ತರೀಯ ಶ್ರುತಿ ವಾಕ್ಯದ 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂಬುದರ ವಿಷಯ ನಿರೂಪಣೆಯೂ, ಭಗವಂತನ ಕಲ್ಯಾಣ ಗುಣಗಳಾದ ಜಗತ್ಕಾರಣತ್ವ, ಆತನ ಸಹೃತ್ವ, ಸ್ವಾಮಿತ್ವ ಹಾಗೂ ಆಶ್ರಿತ ವತ್ಸಲತ್ವಗಳನ್ನು ನಾವು ಕಾಣಬಹುದು. ಸರಲವಾದ ಅರ್ಥದಲ್ಲಿ 'ಎಲೈ ಜಗನ್ನಾಥನೇ ನಿನ ಕೃಪಾ ಕಟಾಕ್ಷವಿಲ್ಲದೆ ಈ ಜಗತ್ತಿನಲ್ಲಿ ಯಾವ ವಸ್ತುವಿಗೂ ಜನನವಿಲ್ಲ. ಜಗತ್ ಮಿತ್ರನಾದ ನೀನು ಆಶ್ರಿತರನ್ನು ಕಾಪಾಡುವುದು ಹೆಚ್ಚೇನು' ಅದು ನಿನ್ನ ಸಹಜ ಗುಣವು' ಎಂದು ಸ್ತೋತ್ರ ಮಾಡಿದ್ದಾರೆ.

ಮುಂದಿನ ಹನ್ನೊಂದನೆಯದು ಶ್ರೀಮನ್ನಾರಾಯಣನೇ ಪರತತ್ತ್ವವೆಂದು ಸಾರುವ ಶ್ಲೋಕ;

ಸ್ವಾಭಾವಿಕಾಽನವ
ಧಿಕಾತಿಶಯೇಶಿತ್ರತ್ವಂ
ನಾರಾಯಣ ತ್ವಯಿ
ನ ಮೃಷ್ಯತಿ ವೈದಿಕಃ ಕಃ
ಬ್ರಹ್ಮಾಶಿವ ಶ್ಶತಮಖಃ
ಪರಮ ಸ್ವರಾಟ್
ಇತ್ಯೇತೇಪಿ ಯಸ್ಯ
ಮಹಿಮಾರ್ಣವವಿಪ್ರುಷ ಸ್ತೇ

'ವೇದೇಷು ಪೌರುಷಂ ಸೂಕ್ತಂ' ಎಂಬಲ್ಲಿ ಪುರುಷಸೂಕ್ತದಲ್ಲಿ ಶ್ರೀಮನ್ನಾರಾಯಣನೇ ಪರತತ್ತ್ವವೆಂದು ಸಾರಿರುವ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡು ಯಾಮುನರು "ಎಲೈ ಶ್ರೀಮತಿಯ ಪತಿಯಾದ ನಾರಾಯಣನೇ ನಿನ್ನಲ್ಲಿ ಸ್ವಾಭಾವಿಕವಾದ ಅವಧಿಯಿಲ್ಲದ, ಮಹಿಮೆಯುಳ್ಳ ಈಶತ್ವವನ್ನು ಯಾವ ವೈದಿಕನು ತಾನೆ ಒಪ್ಪಲಾರನು. ಬ್ರಹ್ಮಶಿವ ಮುಂತಾದ ದೇವತೆಗಳು ಸರ್ವೇಶ್ವರನಾದ ನಿನ್ನ ಅಗಾಧವಾದ ಮಹಿಮೆ ಎಂಬ ಸಾಗರದಲ್ಲಿ ಜಲಕಣಗಳು" ಎಂದು ಕೊಂಡಾಡಿದ್ದಾರೆ.

ಈ ಶ್ಲೋಕದ ವಿಷಯವಾಗಿ ವಿಶೇಷವಾದ ಇತಿಹಾಸವೂ ಉಂಟು. ರಾಮಾನುಜರನ್ನು ಕಾಂಚೀಪುರದಿಂದ ಶ್ರೀರಂಗಕ್ಕೆ ಕರೆತರಲೂ ಯಾಮುನಾಚಾರ್ಯರ ಶಿಷ್ಯರಾದ ಪೆರಿಯನಂಬಿ ಈ ಮೇಲಿನ ಶ್ಲೋಕವನ್ನು ಪಠಣಮಾಡುತ್ತಾ ಬರುತ್ತಿರಲು, ಈ ಶ್ಲೋಕದ ಮಾಧುರ್ಯವನ್ನು ಸವಿದ ರಾಮಾನುಜರು ಇದನ್ನು ರಚಿಸಿದ ಮಹಾನುಭಾವರು ಯಾರು ಎಂಬುದಾಗಿ ಕೇಳಿ ತಿಳಿದು ಯಾಮುನಾಚಾರ್ಯರ ದರ್ಶನವನ್ನು ಪಡೆಯಲು ಕಾಂಚೀಪುರದಿಂದ ಹೊರಟಿದ್ದು ಜನಜನಿತವಾಗಿದೆ.

ಮುಂದಿನ ೧೨ ನೆಯ ಶ್ಲೋಕದಲ್ಲಿ :

ಕಃ ಶ್ರೀ ಶ್ರಿಯಃ ಪರಮ
ಸತ್ವ ಸಮಾಶ್ರಯಃ ಕಃ
ಕಃ ಪುಂಡರೀಕನಯನಃ
ಪುರುಷೋತ್ತಮಃ ಕಃ
ಕಸ್ಯಾಯುತಾಯುತ
ಶತೈಕ ಕಲಾಂಶ ಕಾಂತೇ
ವಿಶ್ವಂ ವಿಚಿತ್ರ ಚಿದ
ಚಿತ್ ಪ್ರವಿಭಾಗವೃತ್ತಂ

ಲಕ್ಷ್ಮಿಗೆ ಆಶ್ರಯ ಭೂತನು, ಶ್ರೀಮನ್ನಾರಾಯಣನೇ, ಶುದ್ಧವಾದ ಸತ್ತ್ವಗುಣಕ್ಕೆ ಆಶ್ರಯದಾತನೂ ಅವನೇ. ಪುರುಷೋತ್ತಮನೂ, ಪುಂಡರಿಕಾಕ್ಷನೂ ಯಾರು? ಅವನೇ. ಏಕೆಂದರೆ ಜಗತ್ತಿನಲ್ಲಿ ಪ್ರಸಿದ್ಧಿ ಹೊಂದಿದ ಬ್ರಹ್ಮರುದ್ರ ಇಂದ್ರಾದಿಗಳು ಶ್ರೀಮನ್ನಾರಾಯಣನಿಂದಲೇ ಸೃಷ್ಟಿಸಲ್ಪಟ್ಟಿರುವವರು.

೧೩ನೆಯ ಶ್ಲೋಕದಲ್ಲಿ ವಿಷ್ಣು ಪಾದೋದಕ ಮಹಿಮೆಯನ್ನೂ ೧೪ ನೆಯ ಶ್ಲೋಕದಲ್ಲಿ ಹರಿಯ ಸೃಷ್ಟಿ ಸ್ಥಿತಿಲಯಗಳ ಹಿರಿಮೆಯನ್ನು ಹೇಳಿದ್ದಾರೆ. ಪರಮಾತ್ಮನ ಕಲ್ಯಾಣಗುಣಗಳನ್ನು ಕುರಿತು ಹಾಡಿದ ಈ ಸ್ತೋತ್ರ ಎಷ್ಟು ಮನೋಹರವಾಗಿದೆ ಸಹೃದಯರು ನೋಡಿ ಆನಂದಿಸಿ.

ವಶೀ ವದಾನ್ಯೋ ಗುಣವಾ‌ನ್, ಋಜುಃ ಶುಚಿಃ
ಮೃದುರ್ದಯಾಳುಃ ಮಧುರ ಸ್ಥಿರಸ್ಸಮಃ
ಕೃತೀಕೃತಜ್ಞಸ್ತ್ವಮಸಿ ಸ್ವಭಾವತಃ
ಸಮಸ್ತ ಕಲ್ಯಾಣ ಗುಣಾಮೃತೋದಧಿಃ

(ಸ್ವಾಮಿ ನೀನು ಪ್ರಭು, ಗುಣವಂತನು. ಕುಟಿಲ ಸ್ವಭಾವವಿಲ್ಲದವನು, ಶುದ್ಧನು. ಮೃದು ಸ್ವಭಾವವುಳ್ಳವನು, ದಯಾಳು, ಆನಂದರೂಪನು, ಸ್ಥಿರನು, ಎಲ್ಲರನ್ನೂ ಸಮದೃಷ್ಟಿಯಿಂದ ನೋಡುವವನು, ಕೃತಜ್ಞನು. ನೀನು ಸ್ವಭಾವತಃ ಸಮಸ್ತ ಕಲ್ಯಾಣ ಗುಣಗಳ ಅಮೃತಸಾಗರ.)

ಭಕ್ತಿಯ ಭಾವುಕತೆಯಲ್ಲಿ ತನ್ಮಯವಾದ ಯಾಮುನರು ತಮ್ಮ ತೀವ್ರ ಹಂಬಲವನ್ನು ದೇವರಲ್ಲಿ ಯಾವ ಬಗೆಯಲ್ಲಿ ಹೇಳಿದರೂ ಸಾಲದು. ಇವರು ಹರಿಯಲ್ಲಿ ಪ್ರಪತ್ತಿಯನ್ನು ಮಾಡುವಾಗ "ಎಲೈ ಹರಿಯೇ ನೀನು ನನ್ನನ್ನು ತ್ಯಜಿಸಲು ದೂರನೂಕಿದರೂ ನಿನ್ನ ಚರಣ ಕಮಲಗಳನ್ನು ನಾ ಬಿಡಲಾರೆ. ತಾಯಿಯಾದವಳು ಮಗುವನ್ನು ಕೋಪದಿಂದ ದೂರ ತಳ್ಳಿದರೂ ಹಾಲು ಉಣ್ಣುವ ಮಗು ತಾಯಿಯ ಆಸರೆಯನ್ನು ಬಿಡಲಾರದಲ್ಲವೆ? ಎಂಬುದಾಗಿ ಯಾಮುನರು ಹರಿಯನ್ನು ಸಂಬೋಧಿಸುವಾಗ-

ನಿರಾಸ ಕಸ್ಯಾಪಿ ನ
ತಾವದುತ್ಸಹೇ, ಮಹೇಶ ಹಾತುಂ
ತವಪಾದ ಪಂಕಜಂ
ರುಷಾ ನಿರಸ್ತೋಪಿ ಶಿಶುಃ ಸ್ತನಂಧಯಃ
ನ ಜಾತು ಮಾತುಃ ಚರಣೌ ಜಿಹಾಸತಿ

ಯಾಮುನಾಚಾರ್ಯರ ಸಿದ್ಧಾಂತದ ಪ್ರಕಾರ ಮೋಕ್ಷವನ್ನು ಕೊಡುವಂತಹ ಮುಕುಂದನ ಪಾದಾರವಿಂದಗಳನ್ನು ಆಶ್ರಯಿಸಿದ ಮೇಲೆ ಮಾನವ ಮತ್ತಾವುದರ ಮಮತೆಯನ್ನು ಮನಸ್ಸಿನಲ್ಲಿ ಮೂಡಿಸಿಕೊಳ್ಳಬಾರದು - ಕಾರಣ; ಮಕರಂದವನ್ನು ಪಾನ ಮಾಡಿದ ದುಂಬಿಯು ತಾವರೆಹೂವನ್ನು ಬಿಟ್ಟು ಮುಳ್ಳಿನ ಹೂವನ್ನು ಕಣ್ಣೆತ್ತಿಯೂ ನೋಡುವುದಿಲ್ಲವಷ್ಟೆ? ಎಂಬುದಾಗಿ ೨೭ ನೆಯ ಶ್ಲೋಕದಲ್ಲಿ ಹೇಳಿದ್ದಾರೆ, ಇಲ್ಲಿ ಹರಿಯೇ ಅನನ್ಯ ವರಣನು, ಸಿದ್ಧೋಪಾಯನು ಎಂಬ ಭಾವ. ಇಪ್ಪತ್ತೆಂಟನೆಯ ಶ್ಲೋಕದಲ್ಲಿ ಭಕ್ತಿಪೂರ್ವಕವಾಗಿ ಒಂದು ಸಲ ಅಂಜಲಿ ಮಾಡಿದರೂ ಸಕಲ ಪಾಪಗಳೂ ತೊಲಗಿ ಮಂಗಳಕರವಾದ ಮೋಕ್ಷವುಲಭಿಸುತ್ತದೆ, ಎಂಬುವುದಾಗಿ ಸ್ತುತಿದ್ದಾರೆ. ಮುಂದೆ ಎರಡು ಶ್ಲೋಕಗಳಲ್ಲೂ ಕೂಡ ಸ್ವಾಮಿಯ ಪಾದಾರವಿಂದಗಳಲ್ಲಿ ಭಕ್ತಿಯನ್ನಿಟ್ಟರೆ ಸಾಕು ಅವರ ಕಷ್ಟಗಳೆಲ್ಲಾ ಕ್ಷಣದಲ್ಲಿ ನಾಶವಾಗುವುವು ಎಂಬುದಾಗಿ ಹೇಳುವಾಗ ತ್ರಿವಿಕ್ರಮನ ಸ್ಮರಣೆಯನ್ನು ಮಾಡುತ್ತಾ.

ಕದಾ ಪುನಶ್ಶಂಖ ರಥಾಂಗ ಕಲ್ಪಕ
ಧ್ವಜಾರವಿಂದಾಂಕುಶ ವಜ್ರಲಾಂಛನಂ
ತ್ರಿವಿಕ್ರಮ ತ್ವಚ್ಚರಣಾಂಬುಜದ್ವಯಂ
ಮದೀಯ ಮೂರ್ಧಾನಮಲಂಕರಿಷ್ಯತಿ
-ಹೀಗೆಂದು ಸ್ತುತಿಸಿದ್ದಾರೆ.

ಭಗವಂತನು ರಕ್ಷಣೆಯ ಭಾರವನ್ನು ಹೊರುವವನು ಎಂಬ ಭರವಸೆ ಬಲಿತಂತೆ ಅವನನ್ನು ನೋಡಬೇಕೆಂಬ ಉತ್ಕಟ ಮನೋಭಾವ ಮನಸ್ಸಿನಲ್ಲಿ ಮೂಡಿ, ಅವನು ಕಾಣದಿರಲು ಬಳಲಿ ಬೆಂಡಾಗಿ ಕುಪಿತನಾಗಿ ಮೊಂಡಾಟ ಮಾಡುವುದು ಅವನ ಸ್ವರೂಪವನ್ನು ದೂಡುವುದು. ಅವನು ತನ್ನನ್ನು ರಕ್ಷಿಸುವಭಾರ ಹೊರದಿದ್ದರೆ ತನ್ನಂತಹ ಸತ್ಪಾತ್ರನು ದೊರೆಯಲಾರನು ಎಂಬುದಾಗಿ ಮೊರೆ ಇಡುತ್ತಾ ಮತ್ತೆ ಸ್ವಾಮಿಯನ್ನು ಕುರಿತು,

ಅವಿಭೂತ ಪೂರ್ವಂ ಮಮಭಾವಿ ಕಿಂ ವಾ
ಸರ್ವಂ ಸಹೇ ಮೇ ಸಹಜಂ ಹಿ ದುಃಖಂ
ಕಿಂತು ತ್ವದಗ್ರೇ ಶರಣಾಗತಾನಾಂ
ಪರಾಭವೋ ನಾಥ ನತೇಽನು ರೂಪಃ

(ಹೇ ಭಗವಾನ್ ದುಃಖವನ್ನು ಅನುಭವಿಸುವುದು ನನ್ನ ಸ್ವಭಾವ. ನನ್ನ ಭಾಗಕ್ಕೆ ಬಂದ ದುಃಖವನ್ನು ಎಷ್ಟಾದರೂ ನಾನು ಸಹಿಸಬಲ್ಲೆ. ಆದರೆ ನಿನ್ನ ಮುಂದೆಯೇ ನಿನ್ನ ಶರಣಾಗತನು ಪರಾಭವಹೊಂದುವುದೂ ನೀನು ಅದನ್ನು ಕುಳಿತುನೋಡುವುದೂ ನಿನ್ನ ಸ್ವರೂಪಕ್ಕೆ ಉಚಿತವೇ? ಎಂಬುದಾಗಿ ಈಶನನ್ನೇ ಯಾಮುನರು ಪ್ರಶ್ನಿಸಿದ್ದಾರೆ. ಮುಂದೆ ೪೮ನೇ ಶ್ಲೋಕದಲ್ಲಿ ತಮ್ಮ ಶರಣಾಗತಿಯನ್ನು ಸೂಚಿಸುತ್ತಾರೆ. ಎಲ್ಲಾ ಅಭಿಲಾಷೆಗಳನ್ನು ಸಂಪೂರ್ಣವಾಗಿ ತ್ಯಜಿಸಿ ಹರಿಯ ಸೇವೆಯೊಂದೇ ತಮ್ಮ ಪರಮ ಗುರಿ ಎಂಬುವುದಾಗಿ ನಿವೇದಿಸಿಕೊಂಡಿದ್ದಾರೆ.

ಅಪರಾಧ ಸಹಸ್ರ ಭಾಜನಂ
ಪತಿತಂ ಭೀಮ ಭವಾರ್ಣವೋದರೇ
ಅಗತಿಂ ಶರಣಾಗತಂ ಹರೇ
ಕೃಪಯಾ ಕೇವಲ ಮಾತ್ಮಸಾತ್ಕುರು

(ಹೇ ಸರ್ವಪಾಪಹರನೇ, ಸಹಸ್ರ ಅಪರಾಧಗಳನ್ನು ಮಾಡಿ ಭವಸಾಗರದಲ್ಲಿ ಬಿದ್ದು ಮುಳುಗಿ ಹೋಗುತ್ತಿರುವ ನಾನು ನಿನ್ನನ್ನೇ ಶರಣು ಹೊಂದುತ್ತೇನೆ. ನನ್ನನ್ನು ನೀನು ಹೊರತು ಮತ್ಯಾರು ಕಾಪಾಡಲಾರರು. ನನ್ನನ್ನು ಕೃಪೆಯಿಂದ ನಿನ್ನವನ್ನಾಗಿ ಮಾಡಿಕೋ.)

ಮುಂದಿನ ಪದ್ಯಗಳಲ್ಲಿ 'ಸ್ವಾಮಿ ನೀನು ಕಲ್ಯಾಣ ಗುಣಗಳ ಗಣಿ. ನಾನು ಜನ್ಮ ಜನ್ಮಗಳಲ್ಲಿ ನಿನ್ನ ಪಾದಾರವಿಂದಗಳನ್ನು ಬಿಡಲಾರೆ. ಕಾರಣ ಸಕಲವೂ ನಿನಗೆ ಶೇಷಭೂತವಾಗಿವೆ. ನಾನು ನಿನಗೆ ಶೇಷಭೂತನು. ನನ್ನನ್ನು ರಕ್ಷಿಸುವ ಭಾರ ಶ್ರೀಮತಿ ಪತಿಯಾದ ನಿನಗೆ ಸೇರಿದ್ದು. ೫೫ನೆಯ ಶ್ಲೋಕದಲ್ಲಿ ಚೇತನನಿಗೆ ಪರಮೋಪಾಯ ಹಾಗೂ ನಿರಂತರ ಸುಖವನ್ನೀವುದು ಯಾವುದೆಂದರೆ ಭಗವಂತನಿಗೂ ಅವನ ಭಕ್ತರ ಕೈಂಕರ್ಯವನ್ನು ಮಾಡುವುದರ ಆನಂದಮಾರ್ಗದಿಂದ. ಅದಕ್ಕಾಗಿ ಯಾಮುನರು;

ತವ ದಾಸ್ಯ ಸುಖೈಕ ಸಂಗಿನಾಂ
ಭವನೇಷು ಅಸ್ತ್ವಪಿ ಕೀಟ ಜನ್ಮಮೆ
ಇತರಾವಸಥೇಷು ಮಾಸ್ಮಭೂ
ದಪಿ ಮೇ ಜನ್ಮ ಚತುರ್ಮುಖಾತ್ಮನಾ

ನಿನ್ನಲ್ಲಿ ಏಕಾಂತ ಭಕ್ತಿಯುಳ್ಳ ಭಕ್ತರ ಮನೆಯಲ್ಲಿ ಒಂದು ಹುಳುವಾಗಿ ಜನ್ಮವಾದರೂ ನನಗೆಲಭಿಸಲಿ, ಆದರೆ ನಿನ್ನಲ್ಲಿ ಭಕ್ತಿ ಇಲ್ಲದವರ ಮನೆಯಲ್ಲಿ ಚತುರ್ಮುಖ ಬ್ರಹ್ಮನಾಗಿ ಹುಟ್ಟುವ ಗೋಜೂ ನನಗೆ ಬೇಡ ಎಂಬುದಾಗಿ ಪ್ರಾರ್ಥಿಸಿಕೊಂಡಿದ್ದಾರೆ.

ಮುಂದೆ ೬೩, ಹಾಗೂ ೬೪ ನೆಯ ಶ್ಲೋಕದಲ್ಲಿ ಸ್ವಾಮಿಯ ಪರಮಕೃಪಾಲು, ಆಶ್ರಿತರು ಎಷ್ಟೇ ಅಪರಾಧಗಳನ್ನು ಮಾಡಿದ್ದರೂ ಕ್ಷಮಿಸುವ ಗುಣ ಆ ಸ್ವಾಮಿಯ ಹಿರಿಯಗುಣ. ಪತ್ನೀ ವಿಚಾರದಲ್ಲಿ ಅಪರಾಧ ಮಾಡಿದ ಕಾಕಾಸುರನನ್ನು ರಾಮನು ಕ್ಷಮಿಸುವ ದೃಷ್ಟಾಂತ, ನೂರು ಅಪರಾಧಗಳನ್ನು ಮಾಡಿದ ಶಿಶುಪಾಲನಿಗೆ ಮೋಕ್ಷ ಸಾಮ್ರಾಜ್ಯಕೊಟ್ಟ ಕೃಷ್ಣನ ಕೃಪಾಕಟಾಕ್ಷದ ಕಥೆ, ಮಿತ್ರಭಾವದಿಂದ ಬಂದ ವಿಭೀಷಣ ಶರಣಾಗತಿಯ ದಿವ್ಯ ಸಂದೇಶಗಳನ್ನು ಸಾರುವ ರಹಸ್ಯಾರ್ಥಗಳ ಸ್ಪಷ್ಟಭಾಷ್ಯವಾಗಿವೆ. ಕೊನೆಯ ಶ್ಲೋಕದಲ್ಲಿ ಇವರು ತಮ್ಮ ತಾತಂದಿರಾದ ನಾಥಮುನಿಗಳ ಬಗ್ಗೆ ಹೇಳುತ್ತಾ ತಮ್ಮ ಕುಲಶೀಲಗಳನ್ನಾದರೂ ನೋಡಿ ತಮ್ಮ ನಡೆಯನ್ನು ವಿವೇಚಿಸದೆ ತಮ್ಮಲ್ಲಿ ಪ್ರಸನ್ನರಾಗಬೇಕೆಂದು ಹರಿಯನ್ನು ಬೇಡುತ್ತಾರೆ. ಅವರ ಅರವತ್ತೈದು ಶ್ಲೋಕಗಳೂ ಅಣಿಮುತ್ತುಗಳು, ಭಾವರಸ ಪ್ರತಿಪಾದನೆಗಳು, ಯಾಮುನರು ಭಕ್ತಿ, ಪ್ರೇಮ, ಉತ್ಕಟವಾದ ಈಶಾನುರಾಗ ನಮ್ಮನ್ನು ಈಗಲೂ ಭಕ್ತಿ ಮಾರ್ಗಕ್ಕೆ ಕರೆದೊಯ್ಯುತವೆ. ಅಂತಹ ಯಾಮುನರಿಗೆ ಆಳವಂದಾರರಿಗೆ ನಮಸ್ಕಾರಗಳು.

(ಜುಲೈ 1985 ಸಪ್ತಗಿರಿ)

# ಆಳವಂದಾರ್ ಸ್ತೋತ್ರ ರತ್ನ

ಸ್ವಾದಯನ್ನಿಹ ಸರ್ವೇಷಾಂ ತ್ರಯಂತಾರ್ಥಂ ಸುದುರ್ಗ್ರಹಂ
ಸ್ತೋತ್ರಯಾಮಾಸ ಯೋಗೀಂದ್ರಃ ತಂ ವಂದೇ ಯಾಮುನಾಹ್ವಯಂ
ನಮೋಽಚಿಂತ್ಯಾದ್ಭುತಾಕ್ಲಿಷ್ಟ ಜ್ಞಾನ ವೈರಾಗ್ಯರಾಶಯೇ
ನಾಥಾಯ ಮುನಯೇಽಗಾಧ ಭಗವದ್ಭಕ್ತಿ ಸಿಂಧವೇ ||೧||

ತಸ್ಮೈ ನಮೋ ಮಧುಜಿದಂಘ್ರಿ ಸರೋಜ ತತ್ತ್ವ
ಜ್ಞಾನಾನುರಾಗ ಮಹಿಮಾತಿಶಯಾಂತ ಸೀಮ್ನೇ
ನಾಥಾಯ ನಾಥಮುನಯೇಽತ್ರ ಪರತ್ರ ಚಾಪಿ
ನಿತ್ಯಂ ಯದೀಯ ಚರಣೌ ಶರಣಂ ಮದೀಯಂ ||೨||

ಭೂಯೋ ನಮೋಽಪರಿಮಿತಾಚ್ಯುತ ಭಕ್ತಿ ತತ್ತ್ವ
ಜ್ಞಾನಾಮೃತಾಬ್ಧಿ ಪರಿವಾಹ ಶುಭೈರ್ವಚೋಭಿಃ
ಲೋಕೇಽವತೀರ್ಣ ಪರಮಾರ್ಥ ಸಮಗ್ರ ಭಕ್ತಿ
ಯೋಗಾಯ ನಾಥಮುನಯೇ ಯಮಿನಾಂ ವರಾಯ ||೩||

ತತ್ತ್ವೇನ ಯಶ್ಚಿದ ಚಿದೀಶ್ವರ ತತ್ಸ್ವಭಾವ
ಭೋಗಾಪವರ್ಗ ತದುಪಾಯ ಗತೀರುದಾರಃ
ಸಂದರ್ಶಯನ್ ನಿರಮಿಮೀತ ಪುರಾಣ ರತ್ನಂ
ತಸ್ಮೈ ನಮೋ ಮುನಿವರಾಯ ಪರಾಶರಾಯ ||೪||

ಮಾತಾಪಿತಾ ಯುವತಯಸ್ತನಯಾ ವಿಭೂತಿಃ
ಸರ್ವಂ ಯದೇವ ನಿಯಮೇನ ಮದನ್ವಯಾನಾಂ
ಆದ್ಯಸ್ಯ ನಃ ಕುಲಪತೇರ್ವಕುಳಾಭಿರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ||೫||

ಯನ್ಮೂರ್ಧ್ನಿ ಮೇ ಶ್ರುತಿಶಿರಸ್ಸು ಚ ಭಾತಿ ಯಸ್ಮಿನ್
ಅಸ್ಮನ್ಮನೋರಥ ಪಥಃ ಸಕಲಃ ಸಮೇತಿ
ಸ್ತೋಷ್ಯಾಮಿ ನಃ ಕುಲಧನಂ ಕುಲದೈವತಂ ತತ್
ಪಾದಾರವಿಂದ ಮರವಿಂದ ವಿಲೋಚನಸ್ಯ ||೬||

ತತ್ತ್ವೇನ ಯಸ್ಯ ಮಹಿಮಾರ್ಣವಶೀಕರಾಣುಃ
ಶಕ್ಯೋ ನ ಮಾತುಮಪಿ ಶರ್ವ ಪಿತಾಮಹಾದ್ಯೈಃ
ಕರ್ತುಂ ತದೀಯ ಮಹಿಮಸ್ತುತಿ ಮುದ್ಯತಾಯ
ಮಹ್ಯಂ ನಮೋಽಸ್ತು ಕವಯೇ ನಿರಪತ್ರಪಾಯ ||೭||

ಯದ್ವಾ ಶ್ರಮಾವಧಿ ಯಥಾಮತಿ ವಾ ಪ್ಯಶಕ್ತಃ
ಸ್ತೌಮ್ಯೇವಮೇವ ಖಲು ತೇಪಿ ಸದಾ ಸ್ತುವಂತಃ
ವೇದಾಶ್ಚತುರ್ಮುಖ ಮುಖಾಶ್ಚ ಮಹಾರ್ಣವಾಂತಃ
ಕೋ ಮಜ್ಜತೋ ರಣುಕುಲಾ ಚಲಯೋರ್ವಿಶೇಷಃ ||೮||

ಕಿಂ ಚೈಷ ಶಕ್ತ್ಯತಿಶಯೇನ ನ ತೇಽನುಕಂಪ್ಯಃ
ಸ್ತೋತಾಽಪಿ ತು ಸ್ತುತಿಕೃತೇನ ಪರಿಶ್ರಮೇಣ
ತತ್ರ ಶ್ರಮಸ್ತು ಸುಲಭೋ ಮಮ ಮಂದ ಬುದ್ಧೇಃ
ಇತ್ಯುದ್ಯಮೋಽಯಮುಚಿತೋ ಮಮ ಚಾಬ್ಜನೇತ್ರ ||೯||

ನಾವೇಕ್ಷಸೇ ಯದಿ ತತೋ ಭುವನಾನ್ಯಮೂನಿ
ನಾಲಂ ಪ್ರಭೋ ಭವಿತುಮೇವ ಕುತಃ ಪ್ರವೃತ್ತಿಃ
ಏವಂ ನಿಸರ್ಗಸುಹೃದಿ ತ್ವಯಿ ಸರ್ವಜಂತೋಃ
ಸ್ವಾಮಿನ್ ನಚಿತ್ರಮಿದಮಾಶ್ರಿತ ವತ್ಸಲತ್ವಂ ||೧೦||

ಸ್ವಾಭಾವಿಕಾನವಧಿಕಾತಿಶಯೇಶಿತೃತ್ವಂ
ನಾರಾಯಣ ತ್ವಯಿ ನ ಮೃಷ್ಯತಿ ವೈದಿಕಃ ಕಃ
ಬ್ರಹ್ಮಾ ಶಿವಃ ಶತಮಖಃ ಪರಮಸ್ವರಾಡಿತಿ
ಏತೇಪಿ ಯಸ್ಯ ಮಹಿಮಾರ್ಣವ ವಿಪ್ರುಷಸ್ತೇ ||೧೧||

ಕಃ ಶ್ರೀಃ ಶ್ರಿಯಃ ಪರಮ ಸತ್ವ ಸಮಾಶ್ರಯಃ ಕಃ
ಕಃ ಪುಂಡರೀಕ ನಯನಃ ಪುರುಷೋತ್ತಮಃ ಕಃ
ಕಸ್ಯಾಯುತಾಯುತ ಶತೈಕ ಕಲಾಂಶಕಾಂಶೇ
ವಿಶ್ವಂ ವಿಚಿತ್ರ ಚಿದಚಿತ್ಪ್ರವಿಭಾಗವೃತ್ತಂ ||೧೨||

ವೇದಾಪಹಾರ ಗುರುಪಾತಕ ದೈತ್ಯ ಪೀಡಾದಿ
ಆಪದ್ವಿಮೋಚನ ಮಹಿಷ್ಠ ಫಲ ಪ್ರದಾನೈಃ
ಕೋನ್ಯಃ ಪ್ರಜಾಪಶುಪತೀ ಪರಿಪಾತಿ ಕಸ್ಯ
ಪಾದೋದಕೇನ ಸ ಶಿವಃ ಸ್ವಶಿರೋ ಧೃತೇನ ||೧೩||

ಕಸ್ಯೋದರೇ ಹರ ವಿರಿಂಚಿ ಮುಖ ಪ್ರಪಂಚಃ
ಕೋ ರಕ್ಷತೀ ಮಂ ಅಜನಿಷ್ಟ ಚ ಕಸ್ಯ ನಾಭೇಃ
ಕ್ರಾಂತ್ವಾ ನಿಗೀರ್ಯ ಪುನರುದ್ಗಿರತಿತ್ವದನ್ಯಃ
ಕಃ ಕೇನ ವೈಷ ಪರವಾನಿತಿ ಶಕ್ಯಶಂಕಃ ||೧೪||

ತ್ವಾಂ ಶೀಲರೂಪಚರಿತೈಃ ಪರಮ ಪ್ರಕೃಷ್ಟ
ಸತ್ತ್ವೇನ ಸಾತ್ವಿಕತಯಾ ಪ್ರಬಲೈಶ್ಚ ಶಾಸ್ತ್ರೈಃ
ಪ್ರಖ್ಯಾತದೈವ ಪರಮಾರ್ಥವಿದಾಂ ಮತೈಶ್ಚ
ನೈವಾಸುರ ಪ್ರಕೃತಯಃ ಪ್ರಭವಂತಿ ಬೋದ್ಧುಂ ||೧೫||

ಉಲ್ಲಂಘಿತ ತ್ರಿವಿಧಸೀಮ ಸಮಾತಿಶಾಯಿ
ಸಂಭಾವನಂ ತವ ಪರಿಬ್ರಢಿಮ ಸ್ವಭಾವಂ
ಮಾಯಾ ಬಲೇನ ಭವತಾಽಪಿ ನಿಗೂಹ್ಯಮಾನಂ
ಪಶ್ಯಂತಿ ಕೇಚಿದನಿಶಂ ತ್ವದನನ್ಯ ಭಾವಾಃ ||೧೬||

ಯದಂಡ ಮಂಡಾಂತರ ಗೋಚರಂ ಚ ಯತ್
ದಶೋತ್ತರಾಣ್ಯಾ ವರಣಾನಿ ಯಾನಿ ಚ
ಗುಣಾಃ ಪ್ರಧಾನಂ ಪುರುಷಃ ಪರಂ ಪದಂ
ಪರಾತ್ಪರಂ ಬ್ರಹ್ಮ ಚ ತೇ ವಿಭೂತಯಃ ||೧೭||

ವಶೀ ವದಾನ್ಯೋ ಗುಣವಾನ್ ಋಜುಃ ಶುಚಿಃ
ಮೃದು ರ್ದಯಾಳು ರ್ಮಧುರಃ ಸ್ಥಿರಸ್ಸಮಃ
ಕೃತೀ ಕೃತಜ್ಞ ಸ್ತ್ವಮಸಿ ಸ್ವಭಾವತಃ
ಸಮಸ್ತ ಕಲ್ಯಾಣಗುಣಾಮೃತೋದಧಿಃ ||೧೮||

ಉಪರ್ಯುಪರ್ಯಬ್ಜ ಭವೋಽಪಿ ಪೂರುಷಾನ್
ಪ್ರಕಲ್ಪ್ಯ ತೇ ಯೇ ಶತಂ ಇತ್ಯನುಕ್ರಮಾತ್
ಗಿರಸ್ತ್ವ ದೇಕೈಕ ಗುಣಾವಧೀಪ್ಸಯಾ
ಸದಾಸ್ಥಿತಾ ನೋದ್ಯಮತೋಽತಿ ಶೇರತೇ || ೧೯ ||

ತ್ವದಾಶ್ರಿತಾನಾಂ ಜಗದುದ್ಭವ ಸ್ಥಿತಿ-
ಪ್ರಣಾಶ ಸಂಸಾರ ವಿಮೋಚನಾದಯಃ
ಭವಂತಿ ಲೀಲಾ ವಿಧಯಶ್ಚ ವೈದಿಕಾಃ
ತ್ವದೀಯ ಗಂಭೀರ ಮನೋನು ಸಾರಿಣಃ || ೨೦ ||

ನಮೋ ನಮೋ ವಾಙ್ಮನ ಸಾತಿ ಭೂಮಯೇ
ನಮೋ ನಮೋ ವಾಙ್ಮನ ಸೈಕ ಭೂಮಯೇ
ನಮೋ ನಮೋಽನಂತ ಮಹಾವಿಭೂತಯೇ
ನಮೋ ನಮೋಽನಂತ ದಯೈಕ ಸಿಂಧವೇ || ೨೧ ||

ನ ಧರ್ಮನಿಷ್ಠೋಽಸ್ಮಿನ ಚಾ ತ್ಮವೇದೀ
ನ ಭಕ್ತಿಮಾನ್ ತ್ವಚ್ಚರಣಾರವಿಂದೇ
ಅಕಿಂಚನೋಽನನ್ಯ ಗತಿಃ ಶರಣ್ಯಃ
ತ್ವತ್ಪಾದ ಮೂಲಂ ಶರಣಂ ಪ್ರಪದ್ಯೇ || ೨೨ ||

ನ ನಿಂದಿತಂ ಕರ್ಮ ಯದಸ್ತಿ ಲೋಕೇ
ಸಹಸ್ರಶೋಽಯಂ ನ ಮಯಾ ವ್ಯಧಾಯಿ
ಸೋಽಹಂ ವಿಪಾಕಾವಸರೇ ಮುಕುಂದ
ಕ್ರಂದಾಮಿ ಸಂಪ್ರತ್ಯಗತಿ ಸ್ತವಾಽಗ್ರೇ || ೨೩ ||

ನಿಮಜ್ಜತೋಽನಂತ ಭವಾರ್ಣವಾಂತಃ
ಚಿರಾಯ ಮೇ ಕೂಲಮಿವಾಸಿ ಲಬ್ಧಃ
ತ್ವಯಾಽಪಿ ಲಬ್ಧಂ ಭಗವನ್ನಿದಾನೀಂ
ಅನುತ್ತಮಂ ಪಾತ್ರಮಿದಂ ದಯಾಯಾಃ || ೨೪ ||

ಅಭೂತಪೂರ್ವಂ ಮಮ ಭಾವಿ ಕಿಂ ವಾ
ಸರ್ವಂ ಸಹೇ ಮೇ ಸಹಜಂ ಹಿ ದುಃಖಂ
ಕಿಂತು ತ್ವದಗ್ರೇ ಶರಣಾಗತಾನಾಂ
ಪರಾಭವೋ ನಾಥ ನತೇಽನುರೂಪಃ || ೨೫ ||

ನಿರಾಸಕಸ್ಯಾಪಿ ನ ತಾವದುತ್ಸಹೇ
ಮಹೇಶ ಹಾತುಂ ತವ ಪಾದಪಂಕಜಂ
ರುಷಾ ನಿರಸ್ತೋಽಪಿ ಶಿಶುಃ ಸ್ತನಂಧಯಃ
ನ ಜಾತು ಮಾತು ಶ್ಚರಣೌ ಜಿಹಾಸತಿ || ೨೬ ||

ತವಾಮೃತಸ್ಯಂದಿನಿ ಪಾದಪಂಕಜೇ
ನಿವೇಶಿತಾತ್ಮಾ ಕಥಮನ್ಯದಿಚ್ಛತಿ
ಸ್ಥಿತೇಽರವಿಂದೇ ಮಕರಂದನಿರ್ಭರೇ
ಮಧುವ್ರತೋ ನೇಕ್ಷುರಕಂ ಹಿ ವೀಕ್ಷತೇ || ೨೭ ||

ತ್ವದಂಘ್ರಿಮುದ್ದಿಶ್ಯ ಕದಾಽಪಿ ಕೇನ ಚಿತ್
ಯಥಾ ತಥಾ ವಾಽಪಿ ಸಕೃತ್‌ಕೃತೋಂಜಲಿಃ
ತದೈವ ಮುಷ್ಣಾತ್ಯ ಶುಭಾನ್ಯ ಶೇಷತಃ
ಶುಭಾನಿ ಪುಷ್ಣಾತಿ ನ ಜಾತು ಹೀಯತೇ || ೨೮ ||

ಉದೀರ್ಣ ಸಂಸಾರದವಾಶು ಶುಕ್ಷಣಿಂ
ಕ್ಷಣೇನ ನಿರ್ವಾಪ್ಯ ಪರಾಂ ಚ ನಿರ್ವೃತಿಂ
ಪ್ರಯಚ್ಛತಿ ತ್ವಚ್ಚರಣಾರುಣಾಂಬುಜ-
ದ್ವಯಾನುರಾಗಾಮೃತಸಿಂಧು ಶೀಕರಃ || ೨೯ ||

ವಿಲಾಸ ವಿಕ್ರಾಂತ ಪರಾವರಾಲಯಂ
ನಮಸ್ಯದಾರ್ತಿಕ್ಷಪಣೇ ಕೃತಕ್ಷಣಂ
ಧನಂ ಮದೀಯಂ ತವ ಪಾದಪಂಕಜಂ
ಕದಾ ನು ಸಾಕ್ಷಾತ್ ಕರವಾಣಿ ಚಕ್ಷುಷಾ || ೩೦ ||

ಕದಾ ಪುನಃಶಂಖ ರಥಾಂಗಕಲ್ಪಕ-
ಧ್ವಜಾರವಿಂದಾಂಕುಶ ವಜ್ರಲಾಂಛನಂ
ತ್ರಿವಿಕ್ರಮ ತ್ವಚ್ಚರಣಾಂಬುಜ ದ್ವಯಂ
ಮದೀಯ ಮೂರ್ಧಾನಮಲಂಕರಿಷ್ಯತಿ || ೩೧ ||

ವಿರಾಜಮಾನೋಜ್ಜ್ವಲ ಪೀತವಾಸಸಂ
ಸ್ಮಿತಾತಸೀಸೂನ ಸಮಾಮಲಚ್ಛವಿಂ
ನಿಮಗ್ನನಾಭಿಂ ತನುಮಧ್ಯಮುನ್ನತಂ
ವಿಶಾಲವಕ್ಷಸ್ಥಲಶೋಭಿಲಕ್ಷಣಂ || ೩೨ ||

ಚಕಾಸತಂ ಜ್ಯಾಕಿಣ ಕರ್ಕಶೈಃ ಶುಭೈಃ
ಚತುರ್ಭಿರಾಜಾನು ವಿಲಂಬಿಭಿ ರ್ಭುಜೈಃ
ಪ್ರಿಯಾವತಂಸೋತ್ಪಲ ಕರ್ಣಭೂಷಣ
ಶ್ಲಥಾಲಕಾಬಂಧ ವಿಮರ್ದಶಂಸಿಭಿಃ || ೩೩ ||

ಉದಗ್ರಪೀನಾಂಸ ವಿಲಂಬಿಕುಂಡಲ-
ಅಲಕಾವಳೀಬಂಧುರ ಕಂಬು ಕಂಧರಂ
ಮುಖಶ್ರೀಯಾನ್ಯಕೃತಪೂರ್ಣನಿರ್ಮಲ
ಅಮೃತಾಂಶು ಬಿಂಬಾಂಬುರುಹೋಜ್ವಲಶ್ರಿಯಂ || ೩೪ ||

ಪ್ರಬುದ್ಧ ಮುಗ್ಧಾಂಬುಜ ಚಾರುಲೋಚನಂ
ಸವಿಭ್ರಮಭ್ರೂಲತ ಮುಜ್ವಲಾಧರಂ
ಶುಚಿಸ್ಮಿತಂ ಕೋಮಲ ಗಂಡಮುನ್ನ ಸಂ
ಲಲಾಟ ಪರ್ಯಂತ ವಿಲಂಬಿತಾಲಕಂ || ೩೫ ||

ಸ್ಫುರತ್ ಕಿರೀಟಾಂಗದ ಹಾರಕಂಠಿಕಾ
ಮಣೀಂದ್ರಕಾಂಚೀ ಗುಣನೂಪುರಾದಿಭಿಃ
ರಥಾಂಗಶಂಖಾಸಿ ಗದಾಧನುರ್ವರೈಃ
ಲಸತ್‌ತುಲಸ್ಯಾ ವನಮಾಲಯೋಜ್ವಲಂ || ೩೬ ||

ಚಕರ್ಥ ಯಸ್ಯಾ ಭವನಂ ಭುಜಾಂತರಂ
ತವ ಪ್ರಿಯಂ ಧಾಮ ಯದೀಯ ಜನ್ಮಭೂಃ
ಜಗತ್ ಸಮಸ್ತಂ ಯದಪಾಂಗ ಸಂಶ್ರಯಂ
ಯದರ್ಥ ಮಂಭೋಧಿ ರಮಂಥ್ಯ ಬಂಧಿಚ || ೩೭ ||

ಸ್ವವೈಶ್ವ ರೂಪ್ಯೇಣ ಸದಾನು ಭೂತಯಾಽಪಿ
ಅಪೂರ್ವ ವತ್‌ವಿಸ್ಮಯ ಮಾದಧಾನಯಾ
ಗುಣೇನ ರೂಪೇಣ ವಿಲಾಸ ಚೇಷ್ಟಿತೈಃ
ಸದಾ ತವೈವೋಚಿತಯಾ ತವ ಶ್ರಿಯಾ || ೩೮ ||

ತ್ವಯಾ ಸಹಾಸೀನ ಮನಂತ ಭೋಗಿನಿ
ಪ್ರಕೃಷ್ಟ ವಿಜ್ಞಾನ ಬಲೈಕ ಧಾಮನಿ
ಫಣಾಮಣಿವ್ರಾತ ಮಯೂಖ ಮಂಡಲ
ಪ್ರಕಾಶ ಮಾನೋದರ ದಿವ್ಯಧಾಮನಿ || ೩೯ ||

ನಿವಾಸ ಶಯ್ಯಾಸನ ಪಾದುಕಾಂಶುಕ-
ಉಪಧಾನ ವರ್ಷಾತಪವಾರಣಾದಿಭಿಃ
ಶರೀರ ಭೇದೈಸ್ತವ ಶೇಷತಾಂ ಗತೈಃ
ಯಥೋಚಿತಂ ಶೇಷ ಇತೀರ್ಯತೇ ಜನೈಃ || ೪೦ ||

ದಾಸಸ್ಸಖಾ ವಾಹನ ಮಾಸನಂ ಧ್ವಜಃ
ಯಸ್ತೇ ವಿತಾನಂ ವ್ಯಜನಂ ತ್ರಯೀಮಯಃ
ಉಪಸ್ಥಿತಂ ತೇನ ಪುರೋ ಗರುತ್ಮತಾ
ತ್ವದಂಘ್ರಿ ಸಮ್ಮರ್ದ ಕಿಣಾಂಕ ಶೋಭಿನಾ || ೪೧ ||

ತ್ವದೀಯ ಭುಕ್ತೋಜ್ಝಿತ ಶೇಷ ಭೋಜಿನಾ
ತ್ವಯಾ ನಿಸೃಷ್ಟಾತ್ಮಭರೇಣ ಯದ್ಯಥಾ
ಪ್ರಿಯೇಣ ಸೇನಾಪತಿನಾ ನ್ಯವೇದಿತತ್
ತಥಾನು ಜಾನಂತ ಮುದಾರ ವೀಕ್ಷಣೈಃ || ೪೨ ||

ಹತಾಽಖಿಲ ಕ್ಲೇಶಮಲೈಃ ಸ್ವಭಾವತಃ
ತ್ವದಾಽನು ಕೂಲ್ಯೈ ಕರಸೈ ಸ್ತವೋಚಿತೈಃ
ಗೃಹೀತ ತತ್ತತ್ಪರಿಚಾರ ಸಾಧನೈಃ
ನಿಷೇವ್ಯಮಾಣಂ ಸಚಿವೈರ್ಯಥೋಚಿತಂ || ೪೩ ||

ಅಪೂರ್ವ ನಾನಾರಸಭಾವ ನಿರ್ಭರ-
ಪ್ರಬುದ್ಧಯಾ ಮುಗ್ಧ ವಿದಗ್ಧ ಲೀಲಯಾ
ಕ್ಷಣಾಣುವತ್ಕ್ಷಿಪ್ತ ಪರಾದಿಕಾಲಯಾ
ಪ್ರಹರ್ಷಯಂತಂ ಮಹಿಷೀಂ ಮಹಾಭುಜಂ || ೪೪ ||

ಅಚಿಂತ್ಯ ದಿವ್ಯಾದ್ಭುತ ನಿತ್ಯಯೌವನ
ಸ್ವಭಾವ ಲಾವಣ್ಯ ಮಯಾಽಮೃತೋದಧಿಂ
ಶ್ರಿಯಃ ಶ್ರಿಯಂ ಭಕ್ತಜನೈಕ ಜೀವಿತಂ
ಸಮರ್ಥಮಾಪತ್ಸಖಮರ್ಥಿ ಕಲ್ಪಕಂ || ೪೫ ||

ಭವಂತ ಮೇವಾನು ಚರನ್ ನಿರಂತರಂ
ಪ್ರಶಾಂತ ನಿಶ್ಶೇಷ ಮನೋರಥಾಂತರಃ
ಕದಾಹ ಮೈಕಾಂತಿಕ ನಿತ್ಯಕಿಂಕರಃ
ಪ್ರಹರ್ಷಯಿಷ್ಯಾಮಿ ಸನಾಥ ಜೀವಿತಃ || ೪೬ ||

ಧಿಗಶುಚಿಮವಿನೀತಂ ನಿರ್ಭಯಂ ಮಾಮಲಜ್ಜಂ
ಪರಮಪುರುಷ ಯೋಽಹಂ ಯೋಗಿ ವರ್ಯಾಗ್ರಗಣ್ಯೈಃ
ವಿಧಿಶಿವಸನಕಾದ್ಯೈ ರ್ಧ್ಯಾತುಮತ್ಯಂತದೂರಂ
ತವ ಪರಿಜನಭಾವಂ ಕಾಮಯೇ ಕಾಮವೃತ್ತಃ || ೪೭ ||

ಅಪರಾಧ ಸಹಸ್ರಭಾಜನಂ, ಪತಿತಂ ಭೀಮ ಭವಾರ್ಣವೋದರೇ
ಅಗತಿಂ ಶರಣಾಗತಂ ಹರೇ ಕೃಪಯಾ ಕೇವಲಮಾತ್ಮಸಾತ್ಕುರು || ೪೮ ||

ಅವಿವೇಕ ಘನಾಂಧದಿಙ್ಮುಖೇ, ಬಹುಧಾ ಸಂತತ ದುಃಖವರ್ಷಿಣಿ
ಭಗವನ್ ಭವದುರ್ದಿನೇಪಥಃ ಸ್ಖಲಿತಂ ಮಾಮವಲೋಕಯಾಽಚ್ಯುತ



ನ ಮೃಷಾ ಪರಮಾರ್ಥಮೇವ ಮೇ, ಶೃಣು ವಿಜ್ಞಾಪನಮೇಕಮಗ್ರತಃ
ಯದಿ ಮೇ ನ ದಯಿಷ್ಯಸೇ ತತಃ ದಯನೀಯಸ್ತವ ನಾಥ ದುರ್ಲಭಃ || ೫೦ ||

ತದಹಂ ತ್ವದೃತೇ ನ ನಾಥವಾನ್ ಮದೃತೇತ್ವಂ ದಯನೀಯವಾನ್ ನ ಚ
ವಿಧಿನಿರ್ಮಿತಮೇತದನ್ವಯಂ ಭಗವನ್ ಪಾಲಯ ಮಾ ಸ್ಮ ಜೀಹಪಃ || ೫೧ ||

ವಪುರಾದಿಷು ಯೋಽಪಿ ಕೋಽಪಿ ವಾ ಗುಣತೋ ಸಾನಿ ಯಥಾ ತಥಾವಿಧಃ
ತದಹಂ ತವ ಪಾದ ಪದ್ಮಯೋಃ ಅಹಮದ್ಯೈವ ಮಯಾ ಸಮರ್ಪಿತಃ || ೫೨ ||

ಮಮ ನಾಥಯದಸ್ತಿ ಯೋಽಸ್ಮ್ಯಹಂ ಸಕಲಂ ತದ್ಧಿ ತವೈವ ಮಾಧವ
ನಿಯತಸ್ವಮಿತಿ ಪ್ರಬುದ್ಧಧೀಃ ಅಥವಾ ಕಿಂನು ಸಮರ್ಪಯಾಮಿ ತೇ || ೫೩ ||

ಅವಬೋಧಿತವಾನಿಮಾಂ ಯಥಾ ಮಯಿ ನಿತ್ಯಾಂ ಭವದೀಯತಾಂ ಸ್ವಯಂ
ಕೃಪಯೈವ ಮನನ್ಯ ಭೋಗ್ಯತಾಂ ಭಗವನ್ ಭಕ್ತಿಮಪಿ ಪ್ರಯಚ್ಛಮೇ || ೫೪ ||

ತವ ದಾಸ್ಯಸುಖೈಕಸಂಗಿನಾಂ ಭವನೇಷ್ವಸ್ತ್ವಪಿ ಕೀಟಜನ್ಮ ಮೇ
ಇತರಾವಸಥೇಷು ಮಾ ಸ್ಮ ಭೂತ್ ಅಪಿ ಮೇ ಜನ್ಮ ಚತುರ್ಮುಖಾತ್ಮನಾ

ಸಕೃತ್ತ್ವದಾಕಾರ ವಿಲೋಕನಾಶಯಾ ತೃಣೀಕೃತಾನುತ್ತಮ ಭುಕ್ತಿ ಮುಕ್ತಿಭಿಃ
ಮಹಾತ್ಮಭಿ ರ್ಮಾಮವಲೋಕ್ಯತಾಂ ನಯ
ಕ್ಷಣೇಽಪಿ ತೇ ಯದ್ವಿರಹೋಽತಿದುಸ್ಸಹಃ || ೫೬ ||

ನ ದೇಹಂ ನ ಪ್ರಾಣಾನ್ ನ ಚ ಸುಖಮಶೇಷಾಭಿಲಷಿತಂ
ನ ಚಾತ್ಮಾನಂ ನಾನ್ಯತ್ ಕಿಮತಿ ತವ ಶೇಷತ್ವ ವಿಭವಾತ್
ಬಹಿರ್ಭೂತಂ ನಾಥ ಕ್ಷಣಮಪಿ ಸಹೇ ಯಾತು ಶತಧಾ
ವಿನಾಶಂ ತತ್ಸತ್ಯಂ ಮಧುಮಥನ ವಿಜ್ಞಾಪನಮಿದಂ || ೫೭ ||

ದುರಂತಸ್ಯಾಽನಾದೇರ ಪರಿಹರಣೀ ಯಸ್ಯ ಮಹತೋ
ನಿಹೀನಾಚಾರೋಽಹಂ ನೃಪಶುರಶುಭಸ್ಯಾಸ್ಪದಮಪಿ
ದಯಾಸಿಂಧೋ ಬಂಧೋ ನಿರವಧಿಕ ವಾತ್ಸಲ್ಯ ಜಲಧೇ
ತವ ಸ್ಮಾರಂ ಸ್ಮಾರಂ ಗುಣಗಣಮಿತೀಚ್ಛಾಮಿ ಗತಭೀಃ || ೫೮ ||

ಅನಿಚ್ಛನ್ನಪ್ಯೇವಂ ಯದಿ ಪುನರಿತೀಚ್ಛನ್ನಿವರಜಸ್-
ತಮಚ್ಛನ್ನಶ್ಛದ್ಮಸ್ತುತಿವಚನಭಂಗೀಃ ಮರಚಯಂ
ತಥಾಪೀತ್ಥಂರೂಪಂ ವಚನಮವಲಂಬ್ಯಾಪಿ ಕೃಪಯಾ
ತ್ವಮೇವೈವಂ ಭೂತಂ ಧರಣಿಧರ ಮೇ ಶಿಕ್ಷಯ ಮನಃ || ೫೯ ||

ಪಿತಾ ತ್ವಂ ಮಾತಾ ತ್ವಂ ದಯಿತ ತನಯಸ್ತ್ವಂ ಪ್ರಿಯಸುಹೃತ್
ತ್ವಮೇವ ತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಂ
ತ್ವದೀಯಃತ್ವದ್ಭೃತ್ಯಸ್ತವ ಪರಿಜನಃ ತ್ವದ್ಗತಿರಹಂ
ಪ್ರಪನ್ನಶ್ಚೈವಂ ಸತ್ಯಹಮಪಿ ತವೈವಾಸ್ಮಿಹಿ ಭರಃ || ೬೦ ||

ಜನಿತ್ವಾಹಂ ವಂಶೇ ಮಹತಿ ಜಗತಿ ಖ್ಯಾತಯಶಸಾಂ
ಶುಚೀನಾಂ ಯುಕ್ತಾನಾಂ ಗುಣಪುರುಷ ತತ್ತ್ವ ಸ್ಥಿತಿ ವಿದಾಂ
ನಿಸರ್ಗಾದೇವ ತ್ವಚ್ಚರಣ ಕಮಲೈಕಾಂತ ಮನಸಾಂ
ಅಧೋಧಃ ಪಾಪಾತ್ಮಾ ಶರಣದ ನಿಮಜ್ಜಾಮಿ ತಮಸಿ || ೬೧ ||

ಅಮರ್ಯಾದಃ ಕ್ಷುದ್ರಃ ಚಲಮತಿರಸೂಯಾ ಪ್ರಸವಭೂಃ
ಕೃತಘ್ನೋ ದುರ್ಮಾನೀ ಸ್ಮರಪರವಶೋ ವಂಚನಪರಃ
ನೃಶಂಸಃ ಪಾಪಿಷ್ಠಃ ಕಥಮಹಮಿತೋ ದುಃಖಜಲಧೇಃ
ಅಪಾರಾಮುತ್ತೀರ್ಣಃ ತವ ಪರಿಚರೇಯಂ ಚರಣಯೋಃ || ೬೨ ||

ರಘುವರ ಯದಭೂಃ ತ್ವಂ ತಾದೃಶೋ ವಾಯಸಸ್ಯ
ಪ್ರಣತ ಇತಿ ದಯಾಳುಃ ಯಸ್ಯ ಚೈದ್ಯಸ್ಯ ಕೃಷ್ಣಃ
ಪ್ರತಿಭವಮಪರಾದ್ಧುಃ ಮುಗ್ಧ ಸಾಯುಜ್ಯದೋಽಭೂಃ
ವದ ಕಿಮಪದಮಾಗಃ ತಸ್ಯ ತೇಽಸ್ತಿ ಕ್ಷಮಾಯಾಃ || ೬೩ ||

ನನು ಪ್ರಪನ್ನಃ ಸಕೃದೇವ ನಾಥ ತವಾಹಮಸ್ಮೀತಿ ಚ ಯಾಚಮಾನಃ

ತವಾನುಕಂಪ್ಯಃ ಸ್ಮರತಃ ಪ್ರತಿಜ್ಞಾಂ ಮದೇಕವರ್ಜಂ ಕಿಮಿದಂ ವ್ರತಂ ತೇ

ಅಕೃತ್ರಿಮತ್ವಚ್ಚರಣಾರವಿಂದ ಪ್ರೇಮ ಪ್ರಕರ್ಷಾವಧಿ ಮಾತ್ಮವಂತಂ
ಪಿತಾಮಹು ನಾಥಮುನಿಂ ವಿಲೋಕ್ಯ ಪ್ರಸೀದ ಮದ್ವೃತ್ತಮಚಿಂತಯಿತ್ವಾ

ಯತ್ಪದಾಂಭೋರುಹಧ್ಯಾನ, ವಿಧ್ವಸ್ತಾಶೇಷಕಲ್ಮಷಃ
ವಸ್ತುತಾಮುಪಯಾತೋಽಹಂ, ಯಾಮುನೇಯಂ ನಮಾಮಿ ತಂ ||

# ಗೀತಾರ್ಥ ಸಂಗ್ರಹ

ಸ್ವಧರ್ಮ ಜ್ಞಾನವೈರಾಗ್ಯ ಸಾಧ್ಯ ಭಕ್ತ್ಯೈಕ ಗೋಚರಃ
ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ ||೧||

ಜ್ಞಾನ ಕರ್ಮಾತ್ಮಿಕೇ ನಿಷ್ಠೇ ಯೋಗಲಕ್ಷ್ಯೇಸುಸಂಸ್ಕೃತೇ
ಆತ್ಮಾನುಭೂತಿಸಿದ್ಧ್ಯರ್ಥೇ ಪೂರ್ವಷಟ್ಕೇನ ಚೋದಿತೇ ||೨||

ಮಧ್ಯಮೇ ಭಗವತ್ತತ್ತ್ವ ಯಾಥಾತ್ಮ್ಯಾವ್ಯಾಪ್ತಿಸಿದ್ಧಯೇ
ಜ್ಞಾನಕರ್ಮಾಭಿ ನಿರ್ವರ್ತ್ಯೋ ಭಕ್ತಿಯೋಗಃ ಪ್ರಕೀರ್ತಿತಃ ||೩||

ಪ್ರಧಾನಪುರುಷವ್ಯಕ್ತ ಸರ್ವೇಶ್ವರ ವಿವೇಚನಮ್
ಕರ್ಮಧೀರ್ಭಕ್ತಿರಿತ್ಯಾದಿಃ ಪೂರ್ವಶೇಷೋಽತಿಮೋದಿತಃ ||೪||

ಅಸ್ಥಾನಸ್ನೇಹ ಕಾರುಣ್ಯ ಧರ್ಮ ಧರ್ಮಧಿಯಾಕುಲಂ
ಪಾರ್ಥಂ ಪ್ರಪನ್ನಮುದ್ದಿಶ್ಯ ಶಾಸ್ತ್ರಾವತರಣಂ ಕೃತಂ ||೫||

ನಿತ್ಯಾತ್ಮಾಸಂಗಕರ್ಮೇಹಾ ಗೋಚರಾ ಸಾಂಖ್ಯ ಯೋಗಧೀಃ
ದ್ವಿತೀಯೇ ಸ್ಥಿತಧೀ ಲಕ್ಷ್ಮಾ ಪ್ರೋಕ್ತಾ ತನ್ಮೋಹ ಶಾಂತಯೇ ||೬||

ಅಸಕ್ತ್ಯಾ ಲೋಕರಕ್ಷಾಯೈ ಗುಣೇಷ್ವಾರೋಪ್ಯಕರ್ತೃತಾಂ
ಸರ್ವೇಶ್ವರೇವಾನ್ಯಸ್ಯೋಕ್ತಾ ತೃತೀಯೇ ಕರ್ಮ ಕಾರ್ಯತಾ ||೭||

ಪ್ರಸಂಗಾತ್ ಸ್ವಸ್ವಭಾವೋಕ್ತಿಃ ಕರ್ಮಣೋಽಕರ್ಮತಾಸ್ಯ ಚ
ಭೇದಾಃ ಜ್ಞಾನಸ್ಯಮಾಹಾತ್ಮ್ಯಂ ಚತುರ್ಥಾಧ್ಯಾಯ ಉಚ್ಯತೇ ||೮||

ಕರ್ಮಯೋಗಸ್ಯ ಸೌಕರ್ಯಂ ಶೈಘ್ರ್ಯಂ ಕಾಶ್ಚ ನತದ್ವಿದಾಃ
ಬ್ರಹ್ಮಜ್ಞಾನ ಪ್ರಕಾರಶ್ಚ ಪಂಚಮಾಧ್ಯಾಯ ಉಚ್ಯತೇ ||೯||

ಯೋಗಾಭ್ಯಾಸ ವಿಧಿರ್ಯೋಗೀ ಚತುರ್ಧಾಯೋಗ ಸಾಧನಂ
ಯೋಗಸಿದ್ಧಿಸ್ಸಯೋಗಸ್ಯ ಪಾರಮ್ಯಂ ಷಷ್ಠ ಉಚ್ಯತೇ ||೧೦||

ಸ್ವಯಾಥಾತ್ಮ್ಯಂ ಪ್ರಕೃತ್ಯಾಸ್ಯ ತಿರೋಧಿಶ್ಶರಣಾಗತಿಃ
ಭಕ್ತಭೇದಃ ಪ್ರಬುದ್ಧಸ್ಯ ಶ್ರೈಷ್ಠ್ಯಂ ಸಪ್ತಮ ಉಚ್ಯತೇ ||೧೧||

ಐಶ್ವರ್ಯಾಕ್ಷರಯಾಥಾತ್ಮ್ಯ ಭಗವಚ್ಚರಣಾರ್ಥಿನಾಮ್
ವೇದ್ಯೋಪಾದೇಯ ಭಾವಾನಾಂ ಅಷ್ಟಮೇ ಭೇದ ಉಚ್ಯತೇ ||೧೨||

ಸ್ವಮಾಹಾತ್ಮ್ಯಂ ಮನುಷ್ಯತ್ವೇ ಪರತ್ವಂ ಚ ಮಹಾತ್ಮನಾಂ
ವಿಶೇಷೋನವಮೇ ಯೋಗೋ ಭಕ್ತಿರೂಪಃ ಪ್ರಕೀರ್ತಿತಃ ||೧೩||

ಸ್ವಕಲ್ಯಾಣಗುಣಾನಂತ್ಯ ಕೃತ್ಸ್ನಸ್ವಾಧೀನತಾಮತಿಃ
ಭಕ್ತ್ಯುತ್ಪತ್ತಿ ವಿವೃದ್ಧ್ಯರ್ಥಾವಿಸ್ತೀರ್ಣಾ ದಶಮೋದಿತಾ ||೧೪||

ಏಕಾದಶೇ ಸ್ವಯಾಥಾತ್ಮ್ಯ ಸಾಕ್ಷಾತ್ಕಾರಾವಲೋಕನಂ
ದತ್ತಮುಕ್ತಂ ವಿಧಿಪ್ರಾಪ್ತ್ಯೋ ಭಕ್ತ್ಯೇಕೋಪಾಯತಾ ತಥಾ ||೧೫||

ಭಕ್ತೇಃ ಶ್ರೈಷ್ಠ್ಯ ಮುಪಾಯೋಕ್ತಿಃ ಅಶಕ್ತಸ್ಯಾತ್ಮನಿಷ್ಠತಾ
ತತ್ಪ್ರಕಾರಾಸ್ತ್ವತಿ ಪ್ರೀತಿಃ ಭಕ್ತೇ ದ್ವಾದಶ ಉಚ್ಯತೇ ||೧೬||

ದೇಹಸ್ವರೂಪ ಮಾತ್ಮಾಪ್ತಿ ಹೇತುರಾತ್ಮ ವಿಶೋಧನಂ
ಬಂಧಹೇತುರ್ವಿವೇಕಶ್ಚ ತ್ರಯೋದಶ ಉದೀರ್ಯತೇ ||೧೭||

ಗುಣಬಂಧ ವಿಧಾತೇಷಾಂ ಕರ್ತೃತ್ವಂ ತನ್ನಿವರ್ತನಂ
ಗತಿತ್ರಯ ಸ್ವಮೂಲತ್ವಂ ಚತುರ್ದಶ ಉದೀರ್ಯತೇ ||೧೮||

ಅಚಿನ್ಮಿಶ್ರಾದ್ವಿಶುದ್ಧಾಚ್ಚ ಚೇತನಾತ್ಪುರುಷೋತ್ತಮಃ
ವ್ಯಾಪನಾದ್ಭರಣಾತ್ಸ್ವಾಮ್ಯಾ ದನ್ಯಃ ಪಂಚದಶೋದಿತಃ ||೧೯||

ದೇವಾಸುರವಿಭಾಗೋಕ್ತಿ ಪೂರ್ವಿಕಾಶಾಸ್ತ್ರ ವಶ್ಯತಾ
ತತ್ತ್ವಾನುಷ್ಠಾನ ವಿಜ್ಞಾನ ಸ್ಥೇಮ್ನೇ ಷೋಡಶ ಉಚ್ಯತೇ ||೨೦||

ಅಶಾಸ್ತ್ರಮಾಸುರಂ ಕೃತ್ಸ್ನಂ ಶಾಸ್ತ್ರೀಯಂ ಗುಣತಃ ಪೃಥಕ್
ಲಕ್ಷಣಂ ಶಾಸ್ತ್ರ ಸಿದ್ಧಸ್ಯ ತ್ರಿಧಾ ಸಪ್ತದಶೋದಿತಂ ||೨೧||

ಈಶ್ವರೇ ಕರ್ತೃತಾಬುದ್ಧಿಃ ಸತ್ತ್ವೋಪಾದೇಯತಾಂತಿಮೇ
ಸ್ವಕರ್ಮ ಪರಿಣಾಮಶ್ಚ ಶಾಸ್ತ್ರಸಾರಾರ್ಥ ಉಚ್ಯತೇ ||೨೨||

ಕರ್ಮಯೋಗ ತಪಸ್ತೀರ್ಥದಾನ ಯಜ್ಞಾದಿ ಸೇವನಂ
ಜ್ಞಾನಯೋಗೋಜಿತಸ್ವಾಂತೈಃ ಪರಿಶುದ್ಧಾತ್ಮನಿ ಸ್ಥಿತಿಃ ||೨೩||

ಭಕ್ತಿಯೋಗಃ ಪರೈಕಾಂತ ಪ್ರೀತ್ಯಾಧ್ಯಾನಾದಿಷು ಸ್ಥಿತಿಃ
ತ್ರಯಾಣಾಮಪಿ ಯೋಗಾನಾಂ ತ್ರಿಭಿರನ್ಯೋನ್ಯ ಸಂಗಮಃ ||೨೪||

ನಿತ್ಯನೈಮಿತ್ತಿಕಾನಾಂ ಚ ಪರಾರಾಧನ ರೂಪಿಣಾಂ
ಆತ್ಮದೃಷ್ಟೇಸ್ತ್ರಯೋಪ್ಯೇತೇ ಯೋಗದ್ವಾರೇಣ ಸಾಧಕಾಃ ||೨೫||

ನಿರಸ್ತ ನಿಖಿಲಾ ಜ್ಞಾನೋ ದೃಷ್ಟ್ವಾತ್ಮಾನಂ ಪರಾನುಗಂ
ಪ್ರತಿಲಭ್ಯಪರಾಂ ಭಕ್ತಿಂ ತಯೈವಾಪ್ನೋತಿ ತತ್ಪದಂ ||೨೬||

ಭಕ್ತಿಯೋಗಸ್ತದರ್ಥೀ ಚೇತ್ ಸಮಗ್ರೈಶ್ವರ್ಯ ಸಾಧಕಃ
ಆತ್ಮಾರ್ಥೀ ಚೇತ್ ತ್ರಯೋಪ್ಯೇತೇ ತತ್ಕೈವಲ್ಯಸ್ಯ ಸಾಧಕಾಃ ||೨೭||

ಐಕಾಂತ್ಯಂ ಭಗವತ್ಯೇಷಾಂ ಸಮಾನಮಧಿಕಾರಿಣಾಮ್
ಯಾವತ್ಪ್ರಾಪ್ತಿ ಪರಾರ್ಥೀಚೇತ್ ತದೇವಾತ್ಯಂತಮಶ್ನುತೇ ||೨೮||

ಜ್ಞಾನೀತು ಪರಮೈಕಾಂತೀ ತದಾಯತ್ತಾತ್ಮ ಜೀವನಃ
ತತ್ಸಂಶ್ಲೇಷ ವಿಯೋಗೈಕ ಸುಖದುಃಖಸ್ತದೇಕಧೀಃ ||೨೯||

ಭಗವದ್ಧ್ಯಾನಯೋಗೋಕ್ತಿ ವಂದನ ಸ್ತುತಿ ಕೀರ್ತನೈಃ
ಲಬ್ಧಾತ್ಮಾ ತದ್ಗತ ಪ್ರಾಣ ಮನೋಬುದ್ಧೀಂದ್ರಿಯ ಕ್ರಿಯಃ ||೩೦||

ನಿಜ ಕರ್ಮಾದಿಭಕ್ತ್ಯಂತಂ ಕುರ್ಯಾತ್ಪ್ರೀತ್ಯೈವಕಾರಿತಃ
ಉಪಾಯತಾಂ ಪರಿತ್ಯಜ್ಯ ನ್ಯಸೇದ್ದೇವೇತುತಾಮಭಿಃ ||೩೧||

ಏಕಾಂತಾತ್ಯಂತ ದಾಸ್ಯೈಕರತಿಸ್ತತ್ಪದ ಮಾಪ್ನುಯಾತ್
ತತ್ಪ್ರಧಾನಮಿದಂ ಶಾಸ್ತ್ರಮಿತಿ ಗೀತಾರ್ಥ ಸಂಗ್ರಹಃ ||೩೨||

೧. ಕರ್ಮಯೋಗ, ಜ್ಞಾನಯೋಗ, ಪರಮಾತ್ಮನ ವಿನಹ ಇತರ ವಿಷಯಗಳನ್ನು ವೈರಾಗ್ಯ ಇವುಗಳಿಂದ ಸಾಧಿಸಬಹುದಾದ, ಭಕ್ತಿಯೊಂದಕ್ಕೇ ತಿಳಿಯುವ ನಾರಾಯಣನೊಬ್ಬನೇ ಪರಬ್ರಹ್ಮನೆನಿಸಿಕೊಳ್ಳುತ್ತಾನೆಂದು ಗೀತಾಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

೨. ಆತ್ಮಾನುಭವ ವೃದ್ಧಿಗೋಸ್ಕರ ಏರ್ಪಟ್ಟ ಸಾತ್ವಿಕ ತ್ಯಾಗ ಮೊದಲಾದವುಗಳಿಂದ ಪರಿಶುದ್ಧವಾದ, ಯೋಗಾಭ್ಯಾಸವು ಮುಖ್ಯ ವಿಷಯವಾಗಿ ಉಳ್ಳ, ಜ್ಞಾನ, ಕರ್ಮ ಎಂಬ ಮುಖ್ಯ ಸ್ಥಿತಿಗಳು, ಮೊದಲ ಆರು ಅಧ್ಯಾಯಗಳಿಂದ ವಿಧಿಸಲ್ಪಟ್ಟಿವೆ.

೩. ಎರಡನೆಯ ಮಧ್ಯದ ಆರು ಅಧ್ಯಾಯಗಳಲ್ಲಿ, ಭಗವಂತನೆಂಬ ತತ್ವದ ಸ್ವರೂಪ-ಸ್ವಭಾವಗಳ ಪ್ರಾಪ್ತಿಗೋಸ್ಕರ, ಜ್ಞಾನ ಮತ್ತು ಕರ್ಮಯೋಗಗಳಿಂದ ನೆರವೇರಿಸಬಹುದಾದ, ಭಕ್ತಿಯೋಗವೆಂಬುದು ಹೇಳಲ್ಪಟ್ಟಿತು.

೪. ಮೂಲಪ್ರಕೃತಿ, ಜೀವ, ಸ್ಥೂಲಪ್ರಕೃತಿ, ಪರಮಾತ್ಮ ಇವುಗಳ ವಿವರವಾದ ವ್ಯಾಖ್ಯಾನವು, ಕರ್ಮ, ಜ್ಞಾನ ಮತ್ತು ಭಕ್ತಿಯೋಗಗಳು ಮೊದಲುಗೊಂಡು, ಹಿಂದಿನ ಆರು ಅಧ್ಯಾಯಗಳಿಗೆ ಅನುಬಂಧವಾದ ವಿಷಯವೆಂದು, ಕೊನೆಯ ಆರು ಅಧ್ಯಾಯಗಳಲ್ಲಿ ಹೇಳಲ್ಪಟ್ಟಿತು.

೫. ಯೋಗ್ಯವಲ್ಲದ ಸ್ಥಳದಲ್ಲಿ ಸ್ನೇಹ, ಕಾರುಣ್ಯ, ದಯೆಗಳಿಂದ, ಧರ್ಮವು ಅಧರ್ಮವೆಂಬ ಬುದ್ಧಿಯಿಂದ ಆವರಿಸಲ್ಪಟ್ಟು, ಕಲಕಿದ ಮನಸ್ಸುಳ್ಳ, ಶರಣಾಗತನಾದ, ಅರ್ಜುನನನ್ನು ಉದ್ದೇಶಿಸಿ ಶಾಸ್ತ್ರಾರಂಭವು ಮಾಡಲ್ಪಟ್ಟಿತು.

೬. ಎರಡನೆಯ ಅಧ್ಯಾಯದಲ್ಲಿ ಅರ್ಜುನನ ಮೋಹ ನಿವೃತ್ತಿಗೋಸ್ಕರ ನಿತ್ಯವಾದ ಆತ್ಮನ ಮತ್ತು ನಿಷ್ಕಾಮ ಕರ್ಮಯೋಗದ ವಿಷಯದಲ್ಲಿ, ಜ್ಞಾನನಿಷ್ಠೆಯೇ ಪ್ರಯೋಜನವಾಗಿ ಉಳ್ಳ ಜ್ಞಾನ ಮತ್ತು ಕರ್ಮಯೋಗಗಳು ಹೇಳಲ್ಪಟ್ಟವು.

೭. ಮೂರನೆಯ ಅಧ್ಯಾಯದಲ್ಲಿ, ಫಲದಲ್ಲಿ ಆಸೆ ಇಲ್ಲದೆ, ಮಂದಮತಿಗಳ ನಡತೆಯನ್ನು ತಿದ್ದುವ ಸಲುವಾಗಿ, ಸತ್ವರಜಸ್ತಮೋ ಗುಣಗಳಲ್ಲಿ ಕಾರ್ಯವನ್ನು ಅನುಸಂಧಾನ ಮಾಡಿ, ಅಥವಾ ಪರಮಾತ್ಮನಲ್ಲಿ ಆಸೆ ಇಟ್ಟು, ಕರ್ಮಯೋಗವನ್ನು ಆಚರಿಸಬೇಕೆಂಬುದು ಹೇಳಲ್ಪಟ್ಟಿತು.

೮. ಸಂದರ್ಭವನ್ನನುಸರಿಸಿ ಶ್ರೀಕೃಷ್ಣನು ತನ್ನ ಸ್ವಭಾವವನ್ನು ಹೇಳುವುದು, ಕಾರ್ಯವನ್ನು ಮಾಡುವುದು, ಆತ್ಮಜ್ಞಾನವಾಗಿರುವುದು, ಈ ಕರ್ಮಯೋಗದ ಭೇದಗಳು, ಜ್ಞಾನದ ಮಹಿಮೆ, ನಾಲ್ಕನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.

೯. ಕರ್ಮಯೋಗದ ಸುಲಭತ್ವವೂ ಶೀಘ್ರದಲ್ಲಿ ಫಲ ಕೊಡುವುದೆಂದೂ, ಕರ್ಮಯೋಗಾನುಷ್ಠಾನದಲ್ಲಿ ಕೆಲವು ರೀತಿಗಳೂ, ಎಲ್ಲ ವಸ್ತುಗಳನ್ನು ಸಮನಾಗಿ ನೋಡುವ ರೀತಿಯೂ, ಐದನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.

೧೦. ಆರನೆಯ ಅಧ್ಯಾಯದಲ್ಲಿ ಯೋಗವನ್ನು ಮಾಡುವ ರೀತಿ, ನಾಲ್ಕು ವಿಧವಾದ ಯೋಗಿಗಳು, ಧ್ಯಾನ, ವೈರಾಗ್ಯ ಮೊದಲಾದ ಯೋಗಕ್ಕೆ ಬೇಕಾದ ಉಪಕರಣಗಳು, ಯೋಗವು ಫಲಿಸುವ ರೀತಿ, ಶ್ರೀವಾಸುದೇವನನ್ನು ಉಪಾಸಿಸುವುದೆಂಬ

ಭಕ್ತಿಯ ಶ್ರೇಷ್ಠತೆ - ಈ ಐದು ವಿಷಯಗಳು ಹೇಳಲ್ಪಡುತ್ತವೆ.

೧೧. ಉಪಾಸನೆಗೆ ತಕ್ಕ ಪರಮಪುರುಷನ ಸ್ವರೂಪವೂ, ಮಾಯೆಯಿಂದ ಭಗವಂತನ ಸ್ವರೂಪದ ಮರೆಯೂ, ಆ ಮಾಯೆಯನ್ನು ಹೋಗಲಾಡಿಸುವ ಸಲುವಾಗಿ ಭಗವಂತನನ್ನು ಶರಣು ಹೋಗುವುದೂ, ಐಶ್ವರ್ಯಾದಿಗಳನ್ನು ಕೋರುವ ನಾಲ್ಕು ವಿಧ ಭಕ್ತರೂ, ಐಶ್ವರ್ಯಾದಿಗಳನ್ನು ಬಿಟ್ಟು ಭಗವಂತನನ್ನೇ ಹೊಂದಬೇಕೆಂಬುವ ಜ್ಞಾನಿಯ ಉತ್ಕೃಷ್ಟತೆಯೂ, ಏಳನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.

೧೨. ಎಂಟನೆಯ ಅಧ್ಯಾಯದಲ್ಲಿ ಸ್ವರ್ಗಾದಿ ಭೋಗಗಳು, ಶುದ್ಧಾತ್ಮಸ್ವರೂಪ, ಭಗವತ್ಪ್ರಾಪ್ತಿಯನ್ನು ಅಪೇಕ್ಷಿಸುವವರಿಗೆ ತಿಳಿಯಬೇಕಾದ ಮತ್ತು ಅಂಗೀಕರಿಸಬೇಕಾದ ವಸ್ತು ವಿಷಯಗಳ ಭೇದವು ಹೇಳಲ್ಪಡುತ್ತದೆ.

೧೩. ಒಂಬತ್ತನೆಯ ಅಧ್ಯಾಯದಲ್ಲಿ ತನ್ನ ಮಹಿಮೆಯು, ಮನುಷ್ಯ ದೇಸೆಯಲ್ಲಿ ಉತ್ಕೃಷ್ಟತ್ವವು, ಮಹಾತ್ಮರ ಮಹಿಮೆಯು, ಭಕ್ತಿ ಎಂಬ ಉಪಾಯವು - ಈ ನಾಲ್ಕು ವಿಷಯಗಳು ಹೇಳಲ್ಪಟ್ಟವು.

೧೪. ತನ್ನ ಕಲ್ಯಾಣ ಗುಣಗಳ ಅಂತ್ಯವಿಲ್ಲದಿರುವುದು, ಎಲ್ಲ ವಸ್ತುಗಳೂ ತನಗೆ ಅಧೀನವೆಂದೆಣಿಸುವುದು, ಭಕ್ತಿ ಉಂಟಾಗುವುದಕ್ಕೂ ಉಂಟಾದ ಭಕ್ತಿಯು ಮೇಲೆ ಮೇಲೆ ಬೆಳೆಯುವುದಕ್ಕೂ ಬೇಕಾದುದು ವಿಸ್ತಾರವಾಗಿ ಹತ್ತನೆ ಅಧ್ಯಾಯದಲ್ಲಿ ಹೇಳಲ್ಪಟ್ಟಿತು.

೧೫. ಹನ್ನೊಂದನೆ ಅಧ್ಯಾಯದಲ್ಲಿ, ತನ್ನ ಮಹಿಮೆಯನ್ನು ಪ್ರತ್ಯಕ್ಷವಾಗಿ ನೋಡುವ ಅವಕಾಶ ಕೊಡಲ್ಪಟ್ಟಿತು. ಹಾಗೆಯೇ ಭಗವಂತನ ಉಪಾಸನೆ, ಭಗವಂತನನ್ನು ಹೊಂದುವುದು, ಇವೆರಡೂ, ಭಕ್ತಿಯೊಂದನ್ನೇ ಉಪಾಯವಾಗಿ ಮಾಡಿಕೊಳ್ಳುವುದು ಹೇಳಲ್ಪಟ್ಟಿದೆ.

೧೬. ಭಗವದ್ಭಕ್ತಿಯ ಉತ್ಕೃಷ್ಟತ್ವವೂ, ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳುವ ಕೆಲವು ಉಪಾಯಗಳ ಹೇಳುವಿಕೆಯೂ, ಭಕ್ತಿಯೋಗವನ್ನು ಮಾಡಲಾರದವರಿಗೆ ಆತ್ಮಸಾಕ್ಷಾತ್ಕಾರದಲ್ಲಿ ಸ್ಥಿರವಾಗಿ ನಿಂತಿರುವುದೂ, ಅವುಗಳಿಗೆ ಬೇಕಾದ ರೀತಿಗಳೂ, ಭಕ್ತಿ ಯೋಗನಿಷ್ಠನಲ್ಲಿ ಭಗವಂತನ ಬಗ್ಗೆ ಹೆಚ್ಚಾದ ಪ್ರೀತಿಯೂ, ಹನ್ನೆರಡನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.

೧೭. ದೇಹದ ಸ್ವರೂಪವೂ, ಆತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವ ಮಾರ್ಗವೂ, ಆತ್ಮಸ್ವರೂಪದ ವಿವರಣೆಯು, ಬಂಧನಕ್ಕೆ ಕಾರಣವೂ, ಕೆಲವು ವಿವೇಕ ಜ್ಞಾನಗಳೂ, ಹದಿಮೂರನೆಯ ಅಧ್ಯಾಯದಲ್ಲಿ ಹೇಳಲ್ಪಡುತ್ತವೆ.

೧೮. ಸತ್ವಾದಿ ಗುಣಗಳು ಜೀವನನ್ನು ಬಂಧಿಸುವ ಪ್ರಕಾರಗಳೂ, ಆ ಸತ್ವಾದಿ ಗುಣಗಳ ಕಾರ್ಯವನ್ನು ಮಾಡಲು ಯೋಗ್ಯತೆಯೂ, ಆ ಸತ್ವಾದಿ ಗುಣಗಳನ್ನು ನಿವರ್ತಿಸುವುದೂ, ಐಶ್ವರ್ಯ, ಕೈವಲ್ಯ ಮೋಕ್ಷ ಎಂಬೀ ಮೂರು ವಿಧವಾದ ಗತಿಗಳಿಗೆ ತಾನೇ ಮೂಲ ಕಾರಣವೆಂಬೂದೂ, ಹದಿನಾಲ್ಕನೆ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.

೧೯. ಶ್ರೀವಾಸುದೇವನು ಎಲ್ಲೆಲ್ಲಿಯೂ ವ್ಯಾಪಿಸಿರುವುದರಿಂದ, ಎಲ್ಲವನ್ನೂ ಹೊತ್ತುಕೊಂಡಿರುವುದರಿಂದ, ಎಲ್ಲಕ್ಕೂ ಸ್ವಾಮಿಯಾಗಿರುವುದರಿಂದ, ಅಚೇತನದೊಡಗೂಡಿರುವ ಒಬ್ಬನಾಗಿರುವುದರಿಂದ ಹಾಗೂ ಅಚೇತನ ದೊಡಗೂಡದಿರುವವನಾಗಿರುವುದ ರಿಂದ, ಜೀವಾತ್ಮನಿಗಿಂತಲೂ ಬೇರೆಯಾದ ವಸ್ತುವೆಂದು ಹದಿನೈದನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

೨೦. ಮೂರು ತತ್ವಗಳು, ಕರ್ಮಾನುಷ್ಠಾನ, ಇವುಗಳ ವಿಜ್ಞಾನ ಅಥವಾ ತಿಳಿವಳಿಕೆಯನ್ನು ಸ್ಥಿರಪಡಿಸುವ ವಿಷಯವಾಗಿ ದೇವಾಸುರರುಗಳು ಪ್ರತ್ಯೇಕಿಸಿ ಹೇಳಿದುದನ್ನು ಮೊದಲಾಗಿಟ್ಟುಕೊಂಡು, ಶಾಸ್ತ್ರಕ್ಕೆ ಬದ್ಧವಾಗಿರುವುದು - ಹದಿನಾರನೆ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.

೨೧. ಶಾಸ್ತ್ರದಲ್ಲಿ ಹೇಳಲ್ಪಡದಿರುವ ಎಲ್ಲವೂ ಅಸುರ ಸಂಬಂಧವಾದುದು. ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವುದೆಲ್ಲವೂ ಸತ್ವರಜಸ್ತಮೋ ಗುಣಗಳಿಂದ ಬೇರೆ ಬೇರೆ ವಿಧವಾದುದೆಂಬುದು, ಶಾಸ್ತ್ರವಿಧಿಗಳ ಮೂರು ವಿಧವಾದ ಲಕ್ಷಣಗಳು, ಇವು ಹದಿನೇಳನೆ ಅಧ್ಯಾಯದಲ್ಲಿ ಹೇಳಲ್ಪಟ್ಟಿತು.

೨೨. ಕೊನೆಯದಾದ ಹದಿನೆಂಟನೆಯ ಅಧ್ಯಾಯದಲ್ಲಿ, ಈಶ್ವರನಲ್ಲಿ ಮಾಡುವೆನೆಂಬ ಎಣಿಕೆಯೂ, ಸತ್ವಗುಣವನ್ನು ತೆಗೆದುಕೊಳ್ಳಬೇಕೆಂಬುದೂ, ತಾನು ಮಾಡಿದ ಕರ್ಮವು ಫಲವನ್ನು ಕೊಡುವ ಪ್ರಕಾರವೂ, ಸಂಪೂರ್ಣ ಭಗವದ್ಗೀತಾಶಾಸ್ತ್ರದ ಸಂಗ್ರಹವಾದ ತಾತ್ಪರ್ಯವು ಅಂದರೆ ಚರಮಶ್ಲೋಕವು ಹೇಳಲ್ಪಟ್ಟಿದೆ.

೨೩. ತಪಸ್ಸು, ತೀರ್ಥಯಾತ್ರೆ, ದಾನ, ಯಜ್ಞ, ಮುಂತಾದವುಗಳನ್ನು ಅನುಷ್ಠಿಸುವುದು ಕರ್ಮಯೋಗ. ಮನಸ್ಸನ್ನು ಜಯಿಸಿದವುಗಳಿಂದ ಶರೀರದೊಡನೆ ಕಲೆತಿರದ ಆತ್ಮನಲ್ಲಿ ಇರುವಿಕೆ ಅಥವಾ ಧ್ಯಾನಿಸುವಿಕೆಯು ಜ್ಞಾನಯೋಗ.

೨೪. ಪರಮಪುರುಷನಲ್ಲಿಯೇ ಇಡಲ್ಪಟ್ಟ ಪ್ರೀತಿಯಿಂದ, ಧ್ಯಾನ, ಸಮಾಧಿ ಮೊದಲಾದವುಗಳಲ್ಲಿ ನೆಲೆಸಿ ನಿಲ್ಲುವುದು ಭಕ್ತಿಯೋಗ. ಕರ್ಮ, ಜ್ಞಾನ, ಭಕ್ತಿಯೋಗಗಳು ಮೂರೂ ಯೋಗಗಳಿಂದ, ಒಂದಕ್ಕೊಂದು ಸೇರಿರುತ್ತವೆ.

೨೫. ಭಗವಂತನನ್ನು ಆರಾಧಿಸುವ ರೂಪದಲ್ಲಿ ನಿತ್ಯ ನೈಮಿತ್ತಿಕ ಕರ್ಮಗಳಿಗೆ, ಕರ್ಮಜ್ಞಾನ, ಭಕ್ತಿಯೋಗಗಳೊಂದಿಗೆ ಸಂಬಂಧವಿರುತ್ತದೆ. ಈ ಮೂರು ಯೋಗಗಳೂ ಯೋಗಾಭ್ಯಾಸದ ಮೂಲಕ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿಕೊಡುತ್ತವೆ.

೨೬. ಎಲ್ಲ ಅಜ್ಞಾನಗಳೂ ತೊಲಗಿ ಹೋಗಿ, ಪರಮಾತ್ಮನಿಗೆ ಶೇಷಭೂತನಾದ ತನ್ನನ್ನು ನೋಡಿ ಪರಮಭಕ್ತಿ ಎಂಬ ಉನ್ನತ ಸ್ಥಿತಿಯನ್ನು ಹೊಂದಿ, ಆತನ ಸ್ಥಾನ ಅಥವಾ ಪಾದಾರವಿಂದವಿರುವ ಪರಮಪದವನ್ನು ಆ ಭಕ್ತಿಯಿಂದಲೇ ಹೊಂದುತ್ತಾನೆ.

೨೭. ಭಕ್ತಿಯೋಗವು, ಇವನು ಐಶ್ವರ್ಯವನ್ನು ಅಪೇಕ್ಷಿಸಿದರೆ, ಎಲ್ಲ ಐಶ್ವರ್ಯಗಳನ್ನು ಸಾಧಿಸಿಕೊಡಬಲ್ಲುದು. ಕೈವಲ್ಯವೆಂಬ ಆತ್ಮಾನುಭವವನ್ನು ಕೋರಿದರೆ, ಈ ಮೂರು ಯೋಗಗಳೂ ಆ ಕೈವಲ್ಯವೆಂಬ ಅನುಭವವನ್ನು ಸಾಧಿಸಿಕೊಡುವ ಶಕ್ತಿಯುಳ್ಳದ್ದಾಗಿದೆ.

೨೮. ಐಶ್ವರ್ಯ, ಕೈವಲ್ಯ, ಮೋಕ್ಷಗಳನ್ನು ಅಪೇಕ್ಷಿಸುವ ಮೂರು ವಿಧವಾದ ಅಧಿಕಾರಿಗಳಿಗೂ, ಇತರ ದೇವತೆಗಳನ್ನು ಪೂಜಿಸುದುದರ ಫಲವನ್ನು ಹೊಂದುವವರಿಗೆ ಭಗವಂತನನ್ನೇ ಅಪೇಕ್ಷಿಸಿದರೆ, ಆ ಪರಮೈಕಾಂತಿತ್ವವನ್ನು ಯಾವಾಗಲೂ ಹೊಂದುವನು.

೨೯. ಆದರೆ ಜ್ಞಾನಿ ಎಂದು ಹೇಳಲ್ಪಟ್ಟವನು, ಪರಮೈಕಾಂತತ್ವವನ್ನು ಪರಮಾತ್ಮನೊಡನೆ ಸೇರಿರುವುದನ್ನು ಸುಖವಾಗಿಯೂ, ಆಗಲಿರುವುದನ್ನು ದುಃಖವಾಗಿಯೂ ಎಣಿಸಿ, ಆತನಲ್ಲಿಯೇ ಬುದ್ಧಿಯನ್ನಿಟ್ಟಿರುತ್ತಾನೆ.

೩೦. ಭಗವಂತನನ್ನು ಧ್ಯಾನಿಸುವುದು, ಯೋಗಾಭ್ಯಾಸ. ಶಿಷ್ಯರಿಗೆ ಉಪದೇಶಿಸುವುದು, ಮನೋವಾಕ್ಕಾಯಪೂರ್ವಕವಾಗಿ ಅವನಿಗೆ ತಲೆಬಾಗಿ ನಮಸ್ಕರಿಸುವುದು, ಭಗವಂತನ ಗುಣಗಾನ ಮಾಡುವುದು, ಪುಣ್ಯ ಕಥೆಗಳನ್ನು ಹೇಳುವುದು - ಇವುಗಳ ಮೂಲಕ ಆತ್ಮಸ್ವರೂಪವನ್ನು ಹೊಂದಿದವನಾಗಿ, ಭಗವಂತನಲ್ಲಿಯೇ ಇಡಲ್ಪಟ್ಟ ಪ್ರಾಣ, ಮನಸ್ಸು, ಮನೋವೃತ್ತಿ ಎಂಬ ಆಧ್ಯವಸಾಯ, ಇಂದ್ರಿಯಗಳು ಪರಮಾತ್ಮನನ್ನೇ ಹೊಂದಿದುವೆಂದೆಣಿಸಿ ಇರುವವನು, ಜ್ಞಾನಿ.

೩೧. ವರ್ಣಾಶ್ರಮ ಧರ್ಮಗಳಿಗೆ ತಕ್ಕ ನಿತ್ಯ ಕರ್ಮವೇ ಮೊದಲಾಗಿ ಭಕ್ತಿಯವರಿವಿಗೆ ಎಲ್ಲ ಕ್ರಿಯೆಗಳನ್ನೂ ಭಗವಂತನಲ್ಲಿ ಅತ್ಯಂತ ಪ್ರೀತಿಯಿಂದಲೇ ಮಾಡಬೇಕು. ಮೋಕ್ಷವನ್ನೂ, ಸಹ ಫಲವೆಂದೆಣಿಸದೆ, ಭಗವತ್ಕೈಂಕರ್ಯ ರೂಪವಾಗಿ ಮಾಡಲ್ಪಡುವ ನಿತ್ಯನೈಮಿತ್ತಿಕ ಕರ್ಮಗಳಿಗೆ ಪ್ರೀತಿಯೇ ಫಲ ಎಂದೆಣಿಸಬೇಕು. ಭಯರಹಿತನಾಗಿ ಭಗವಂತನಲ್ಲಿಯೇ ಉಪಾಯತ್ವವನ್ನು ಇಡಬೇಕು.

೩೨. ಇತರ ದೇವತಾ ಸಂಬಂಧವನ್ನು ಬಿಟ್ಟು ಭಗವಂತನಿಗೆ ಯಾವಾಗಲೂ ಕೈಂಕರ್ಯವನ್ನು ಮಾಡಬೇಕೆಂದು ಅಪೇಕ್ಷಿಸುವವನು, ಅಂದರೆ ಭಗವಂತನಲ್ಲಿ ಪೂರ್ಣ ದಾಸ್ಯವೃತ್ತಿಯಲ್ಲಿ ಅಪೇಕ್ಷೆಯುಳ್ಳವನು, ಭಗವಂತನ ಪರಮಪದವನ್ನು ಹೊಂದುವನು. ಹೀಗೆ ಈ ಗೀತಾಶಾಸ್ತ್ರವು ಇತರ ಅಲ್ಪ ಫಲಗಳನ್ನು ಬಿಟ್ಟು ಮೋಕ್ಷೋಪಾಯವೇ ಪ್ರಧಾನವಾದುದೆಂದು ತಿಳಿಸುತ್ತದೆ.

(ಯೋಗಶಾಸ್ತ್ರದಲ್ಲಿ ಪಾರಂಗತರಾದ ನಾಥಮುನಿಗಳಿಂದ ಉಪದೇಶಿಸಲ್ಪಟ್ಟ ಅರ್ಥಗಳನ್ನು, ಯಾಮುನರು ತಮ್ಮ ಗುರುಗಳಾದ ಶ್ರೀರಾಮಮಿಶ್ರರಿಂದ ಅನೇಕಾವರ್ತಿ ಕೇಳಿ ತಿಳಿದ ಅರ್ಥವಿದು. ಆದುದರಿಂದ, ಇದು ಶ್ರೀಕೃಷ್ಣಪರಮಾತ್ಮನ ಮನಸ್ಸಿನಲ್ಲಿದ್ದ ಅರ್ಥವೆಂಬುದರಲ್ಲಿ ಸಂದೇಹವಿಲ್ಲವೆಂಬುದು ಯಾಮುನರ ದೃಢ ಅಭಿಪ್ರಾಯ.)

**ಎಚ್. ಜಿ. ರಾಮೈಂಗಾರ್**

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ
ಶ್ರೀ ಕೋದಂಡರಾಮಸ್ವಾಮಿ ದೇವಾಲಯ
ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು
ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ
ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು. (೨ ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)

ಬಸ್ ಹೊರಡುವ ಕಾಲ : ಬೆಳಗ್ಗೆ ೬--೦೦, ಬೆಳಗ್ಗೆ ೧೦--೦೦, ಸಂಜೆ ೩--೦೦

ಬಸ್ ಪ್ರಯಾಣದ ದರ : ಒಂದು ಟಿಕೆಟ್ಟಿಗೆ ೨೦ ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇ.**

ಮಟ್ಲಿ ವಂಶದ ರಾಜರು ಈ ಜಿಲ್ಲೆಯೊಡನೆ ಅತಿ ನಿಕಟ ಸಂಬಂಧ ಹೊಂದಿದ್ದ ಸಾಮಂತ ವಂಶದವರು. ಇವರು ದೇವಚೋಡ ಮನೆತನದವರು. ಇವರು ರಾಯಚೋಟಿಯ ಮಟ್ಲಿವಿಂದ ಆಳ್ವಿಕೆ ನಡೆಸಿ ವಿಜಯನಗರ ಪ್ರಸಿದ್ಧಿಯ ಮೇಲ್ತುದಿಯನ್ನು ತಲುಪಿದಾಗ ಮುಂಚೂಣಿಯಲ್ಲಿ ಬಂದಿದ್ದರು. ಸಾಮ್ರಾಟನ ಮನೆಯಲ್ಲಿ ಮದುವೆಯ ವ್ಯವಹಾರ ನಡೆಸುವಷ್ಟು ಮೇಲಿನಸ್ತರಕ್ಕೆ ಏರಿದರು. ವಿಜಯನಗರದ ನಾಲ್ಕನೆಯ ಅರಸುವಂಶ - ಅರವೀಡು ವಂಶಕ್ಕೆ ನಿಷ್ಠೆಯಿಂದ ನಡೆದುಕೊಂಡು ವಿಜಯನಗರದ ವಿವಿಧ ಮುಖದ ಪರಂಪರೆಯನ್ನು ಮುಂದುವರಿಸಲು ಕಾರಣರಾದರು.

ಈ ವಂಶದ ಮೂಲಪುರುಷ ದೊಮ್ಮರಾಜ. ಅವನಿಗೆ ಸೋಮರಾಜ, ತಿಮ್ಮರಾಜ, ಮಂಗರಾಜ ಎಂಬ ಮೂವರು ಗಂಡುಮಕ್ಕಳು. ಸೋಮರಾಜನಿಗೆ ಐವರು ಪುತ್ರರು. ಇವರಲ್ಲಿನ ಹಿರಿಯ ಪೋತರಾಜನಿಗೆ ಆರುಮಂದಿ ಮಕ್ಕಳಾಗಿ ಹಿರಿಯನಿಗೆ ವರದರಾಜನೆಂಬ ಹೆಸರು. ತಿಮ್ಮರಾಜನ ಮಗ ಕೋನರಾಜ ಅವನ ಮಗ ಎಲ್ಲಮರಾಜ. ಎಲ್ಲಮರಾಜನಿಗೆ ನಾಲ್ವರು ಪುತ್ರರು. ತಿರುಮಲ, ವರದ, ಚಿನ್ನತಿಮ್ಮ ಹಾಗೂ ಅನಂತ (ಮಟ್ಲಿ ಅನಂತರಾಜ - ಕಾಕುಸ್ಥ ವಿಜಯಮು ಕರ್ತೃ) ಮಂಗರಾಜನಿಗೆ ಗುರವಯ್ಯ ದೇವಚೋಡನೆಂಬ ಮಗ. ಈ ಪಾಳಯಗಾರರಲ್ಲಿ ಕೃಷ್ಣದೇವರಾಯನ ಅಳಿಯನಾದ ವರದರಾಜನು ನಿಜವಾದ ರಾಜನಂತೆಯೇ ಪ್ರವರ್ತಿಸಿದ. ತಿರುಪತಿಯ ಕ್ರಿ.ಶ. ೧೫೪೪ರ ಒಂದು ಶಾಸನವು ೩೧೨ ರೇಖೈಪೊನ್ (ಬಂಗಾರದ ನಾಣ್ಯ) ಗಳ ದಾನವನ್ನು ದಾಖಲಿಸುತ್ತದೆ. ಇದನ್ನು ಅಧಿಕಾರಿಗಳು ಆಲಯಗ್ರಾಮಗಳ ಕೆರೆಕಾಲುವೆಗಳ ದುರಸ್ತಿಗಾಗಿ ಬಳಸಿದರು. ವರದರಾಜನಿಗೆ 'ಕಾವೇರೀ ವಲ್ಲಭ' ಗಂಡಭೇರುಂಡ, ಮೊದಲಾದ ಬಿರುದುಗಳೂ ಇದ್ದವು. ಕೊನರಾಜನ ಮಗ ಎಲ್ಲಮರಾಜನು ಮಟ್ಲಿ ವಂಶದ ಗೌರವವನ್ನು ಹೆಚ್ಚಿಸಿದ. ವಿಜಯನಗರದ ರಾಯ ಎರಡನೇ ವೆಂಕಟನಿಗೆ ನಿಷ್ಠೆಯಿಂದ ಇದ್ದ ಇವನು ಕೊಂಡರಾಜು ತಿರುಪತಿರಾಜು ಹಾಗೂ ಕೊಂಡರಾಜು ವೆಂಕಟರು ದಂಗೆಯೆದ್ದಾಗ ಅವರ ದಂಗೆಯನ್ನಡಗಿಸಿದ. ಎರಡನೆ ವೆಂಕಟನು ಇವನ ಸೇವೆಯನ್ನು ಚಂದ್ರಗಿರಿ ರಾಜ್ಯದ ಪುರುಗುನಾಟಿ ಸೀಮೆಯನ್ನು ನೀಡುವುದರಿಂದ ಸತ್ಕರಿಸಿದ. ಮಟ್ಲಿವಂಶದಲ್ಲಿ ನಂತರ ಬಂದ ರಾಜರಲ್ಲಿ ಅನಂತರಾಜ ಪ್ರಮುಖ. ಇವನೊಬ್ಬ ಅಸಹಾಯ ಶೂರನೂ, ವಿದ್ವಾಂಸನೂ ಆಗಿದ್ದ. ಹಿಂದೆಯೇ ತಿಳಿಸಿರುವಂತೆ ಎರಡನೇ ವೆಂಕಟನ ಆದೇಶದಂತೆ ಇವನು, ಕುತುಬ್‌ಷಾಹೀ ಸೈನ್ಯ ಆಕ್ರಮಿಸಿದ್ದ ಗುರ್‍ರಂಕೊಂಡವನ್ನು ವಶಪಡಿಸಿಕೊಂಡ. ಅನಂತರಾಜನು ತನ್ನ ಮಗ ತಿರುವೆಂಗಳನಾಥ ಹಾಗೂ ಮೊಮ್ಮೊಗ್ಗ ಕುಮಾರ-ಅನಂತರಿಂದ ಹಿಂಬಾಲಿಸಲ್ಪಟ್ಟ. ಕುಮಾರ ಅನಂತನು ತಿರುಪತಿ ಹಾಗೂ ಅಹೋಬಿಲ ಪರ್ವತಗಳ ನಡುವಣ ರಾಜ್ಯದಲ್ಲಿ ಅಧಿಕಾರ ಚಲಾಯಿಸಿದ. ಇವನೊಬ್ಬ ಪ್ರತಿಷ್ಠಿತ ವಿದ್ವಾಂಸನೂ ಆಗಿದ್ದ. ರಾಮಾನುಜರ ವಿಶಿಷ್ಟಾದ್ವೈತವನ್ನು ಅವಲಂಬಿಸಿದರೂ ಪರಮತ ಸಹಿಷ್ಣುವಾಗಿದ್ದು, ತಿರುಮಲೆಯ ಬುಡದ ಅಲಿಪಿರಿಯಲ್ಲಿನ ಪಾತಾಳಮಂಟಪದ ಗೋಡೆಯ ಎರಡು ಶಾಸನಗಳಲ್ಲಿ (ಶಕವರ್ಷ - ೧೫೫೦ - ಕ್ರಿ.ಶ. ೧೬೨೮) ಇವನ ಸಾಧನೆಗಳನ್ನು ವಿವರವಾಗಿ ದಾಖಲಿಸಲಾಗಿದೆ. ಸೇತುವಿನಿಂದ ಹಿಮಾಲಯದವರೆಗೆ ಹೊರಡುವ ಯಾತ್ರಿಕ ಭಕ್ತರಿಗಾಗಿ ಇವನು ಹಲವು ಅನ್ನಸತ್ರಗಳನ್ನು ನಿರ್ಮಿಸಿದ. ಈ ಅನ್ನಸತ್ರಗಳಲ್ಲಿ ಒಂದು ತಿರುಪತಿಯಲ್ಲಿಯೇ ಸ್ಥಾಪಿಸಲ್ಪಟ್ಟಿತು. ಇತರ ನಿರ್ಮಾಣಗಳೊಡನೆ ತಿರುಪತಿಯಲ್ಲಿನ ಅಗ್ರಗೋಪುರ - ಗಾಳಿಗೋಪುರವನ್ನೂ ಅಲಿಪಿರಿಯಿಂದ ತಿರುಮಲೆಗೆ ಮೆಟ್ಟಿಲ ಮಾರ್ಗವಿನ್ನೂ, ಅನಂತಕೇಳೀ ಮಂಟಪವನ್ನೂ (ಆಟೋಟಗಳ ಮೈದಾನ)ವನ್ನೂ ನಿರ್ಮಿಸಿದ. ತಿರುಪತಿಯ ಇತರ ಶಾಸನಗಳು ಇವನು ಗೋವಿಂದರಾಜಸ್ವಾಮಿಯ ಏಳು ಅಂತಸ್ತಿನ ದ್ವಾರ ಗೋಪುರವನ್ನೂ, ತಿರುಮಲೆಯ ಕಾಲುಹಾದಿಯ ಕೊತ್ತಗೋಪುರ ಮಂಟಪವನ್ನೂ ನಿರ್ಮಿಸಿದ್ದನ್ನು ವಿವರಿಸುತ್ತವೆ. ಆಲಯಕ್ಕೆ ಇವನು ನೀಡಿದ ಕಾಣಿಕೆಗಳಲ್ಲಿ ದೇವರ ವಜ್ರಕಿರೀಟವು ಸೇರಿದೆ. ಶ್ರೀ ಕಾಳಹಸ್ತಿಯ ಆಲಯಕ್ಕೂ ಇವನು ಅನೇಕ ದತ್ತಿಗಳನ್ನು ನೀಡಿದ. ಇವೆಲ್ಲದರಿಂದ ಮಟ್ಲಿವಂಶವು ಕುಮಾರ ಅನಂತರಾಜನ ಕಾಲದಲ್ಲಿ ತನ್ನ ಕೀರ್ತಿಶಿಖರವನ್ನು ಮುಟ್ಟಿದ್ದಿತು ಎನ್ನಲಿಕ್ಕುಂಟು.

# ಶ್ರೀ ವೆಂಕಟೇಶ್ವರಸ್ವಾಮಿ ಆಲಯ

ಆಂಗ್ಲಮೂಲ : ಡಾ|| ಎನ್. ರಮೇಶನ್
ಅನುವಾದ : ಬಿ. ಎನ್. ಶ್ರೀನಿವಾಸನ್.

## ವಿಜಯನಗರದ ಸಾಮಂತರ ಹಾಗೂ ನಂತರದ ಕಾಲ

ಅನಂತರಾಜ ದೇವಚೋಡ ಅಥವಾ ಎರಡನೇ ಅನಂತನು ಕುಮಾರ ಅನಂತರಾಜನ ಉತ್ತರಾಧಿಕಾರಿಯಾದ. ಇವನ ಆಳ್ವಿಕೆಯಲ್ಲಿ ಮಟ್ಲಿದವರು ಸಾಕಷ್ಟು ಪ್ರದೇಶಗಳನ್ನು ಗೊಲ್ಕೊಂಡದ ಸುಲ್ತಾನನಿಗೆ (ಕ್ರಿ.ಶ. ೧೬೪೪ - ೧೬೪೫) ಕಳೆದುಕೊಂಡರು ಇಷ್ಟಾದರೂ ಅವರ ಆಳ್ವಿಕೆಯು ಚಂದ್ರಗಿರಿ ರಾಜ್ಯದ ಪುರುಗುಲನಾಡುವಿನಿಂದ ಕಡಪಜಿಲ್ಲೆಯ ಪಟ್ಟಪಿನಾಡು ಹಾಗೂ ಸಿದ್ಧವಟ ಸೀಮೆಯವರೆಗೆ ಹರಡಿದ್ದಿತು. ಕುಮಾರ ಅನಂತನು ತನಗೆ ಆಡಳಿತದಲ್ಲಿಯೂ ನೆರವು ನೀಡುತ್ತಿದ್ದ ತನ್ನ ಚಿಕಪ್ಪ ಎಲ್ಲಮನೊಡನೆ ಸೇರಿ ಸೈನ್ಯ ತೆಗೆದುಕೊಂಡು ಹೋಗಿ, ಅಬ್ದುಲ್ಲಾ ಕುತುಬ್ ಷಹನು ಕಳುಹಿಸಿದ ಸೈನ್ಯವನ್ನು ದಾರುಣವಾಗಿ ಸೋಲಿಸಿದರೂ, ಪ್ರತೀಕಾರ ಭಯದಿಂದ ಕುಮಾರ ಅನಂತನು ಇಕ್ಕೇರಿ ಬಸವಾಪುರಕ್ಕೆ ಓಡಿಹೋದ. ನಿರೀಕ್ಷಿಸಿದಂತೆಯೇ ಮಿರ್‌ಜುಮ್ಲಾ ಸೈನ್ಯದೊಡನೆ ಬಂದು ಇವನ ರಾಜ್ಯವನ್ನು ಆಕ್ರಮಿಸಿ ಆಡಳಿತ ಸೂತ್ರಗಳನ್ನು ತ್ರಿಯಂಬಕ ಶಂಕರಜಿ ಪಂತ

ನಿಗೆ ನೀಡಿದ. ಇದರಿಂದಾಗಿ ಕಡಪಜಿಲ್ಲೆಯ ರಾಜಂಪೇಟೆಯಲ್ಲಿ ಇವರು ಆಡಳಿತ ನಡೆಸಿದರು ಎಂದು ವರದಿಯಿದ್ದರೂ ಈ ಸೀಮೆಯಲ್ಲಿನ ಮಟ್ಲವಂಶದ ಆಡಳಿತ ಇಲ್ಲಿಗೇ ಕೊನೆಗೊಂಡಿತು.

ತದನಂತರ ಈ ಸೀಮೆಯಲ್ಲಿನ ಮುಖ್ಯ ಗಮನಾರ್ಹ ಘಟನೆಯೆಂದರೆ ಶಿವಾಜಿಯು ಜಿಂಜಿಯ ಮೇಲೆ ದಂಡೆತ್ತಿಹೋದಾಗ ಕ್ರಿ.ಶ. ೧೬೭೭ - ೭೮ ರಲ್ಲಿ - ತಿರುಪತಿ ಕಣಿವೆಯಲ್ಲಿ ಹಾದುಹೋದದ್ದು ಹಾಗೂ ಔರಂಗಜೇಬನು ಕುತುಬ್ ಷಾಹೀ ಸುಲ್ತಾನ ರಾಜ್ಯವನ್ನು ೧೬೮೭ ರಲ್ಲಿ ತನ್ನ ಅಧೀನಕ್ಕೆ ತಂದುಕೊಂಡದ್ದು.

<u>ಕ್ರಿ.ಶ. ೧೬೫೦ ರಿಂದ ೧೮೦೦ ವರೆಗೆ ತಿರುಮಲೆ.</u>

ಹದಿನೇಳನೇ ಶತಮಾನದ ಮಧ್ಯದಲ್ಲಿ ತಿರುಮಲೆ - ತಿರುಪತಿ ಪ್ರಾಂತ್ಯವು ಗೋಲ್ಕೊಂಡ ಸುಲ್ತಾನರ ಆಳ್ವಿಕೆಯಲ್ಲಿ ಸೇರಿ ಸುಮಾರು ಒಂದೂವರೆ ಶತಮಾನಗಳ ಕಾಲ ಅವರ ಅಧೀನದಲ್ಲಿಯೇ ಇದ್ದಿತು. ಈ ಕಾಲವೆಲ್ಲ ಗೊಂದಲಗಳ, ಅರಾಜಕತೆಯ, ಅವ್ಯವಸ್ಥೆಯ ಕಾಲವಾಗಿದ್ದು, ಈ ಸೀಮೆಯಲ್ಲಿ ಹೆಸರು ಹೇಳುವ ಯಾವುದೇ ಆಡಳಿತವೂ ಇರಲಿಲ್ಲ. ವಿಜಯನಗರದ ಹಿಂದೂ ಸಾಮ್ರಾಜ್ಯ ಖಿಲವಾಗಿದ್ದು, ಕುತುಬ್‌ಷಹ, ಮೊಗಲರು, ನಿಜಾಮ, ಮರಾಠರು, ಆರ್ಕಾಟಿನ ನವಾಬರು, ಹೈದರಾಲಿ, ಆಂಗ್ಲರು ಮತ್ತು ಫ್ರೆಂಚರು ಸೀಮೆಯನ್ನು ಪ್ರವೇಶಿಸಿ, ಸೀಮೆಯ ಗೊಂದಲಗಳಿಗೂ, ಕಷ್ಟಗಳಿಗೂ ತಮ್ಮ ವಂತಿಗೆ ನೀಡಿದರು.

ಕುತುಬ್ ಷಾಹೀ ಆಳ್ವಿಕೆ : ಕ್ರಿ.ಶ. ೧೬೪೦ ರಲ್ಲಿ ವಿಜಯನಗರದ ರಾಜ ಎರಡನೇ ವೆಂಕಟನು ಆಂಗ್ಲರ ಈಸ್ಟ್ ಇಂಡಿಯಾ ಕಂಪನಿಗೆ ಪೂರ್ವ ಸಮುದ್ರತೀರದಲ್ಲಿ ಸ್ವಲ್ಪಸ್ಥಳ ನೀಡಿದ. ಅವರು ಅಲ್ಲಿ ಸಂತಜಾರ್ಜ್ ಕೋಟೆಯನ್ನು ನಿರ್ಮಿಸಿದರು. ಇನ್ನೂ ಕೆಳಗಡೆ ಪಾಂಡಿಚೆರಿಯಲ್ಲಿ ಫ್ರೆಂಚರು ತಮ್ಮ ನೆಲೆಯನ್ನು ಏರ್ಪಡಿಸಿಕೊಂಡು, ಇಬ್ಬರೂ ನಂತರದ ನೂರುವರ್ಷಗಳಲ್ಲಿ ಸ್ಥಳೀಯ ರಾಜರ ಒಳಜಗಳಗಳಲ್ಲಿ ಹಸ್ತಕ್ಷೇಪ ಮಾಡಿ ಲಾಭಪಡೆಯ ಹತ್ತಿದರು. ಕುತುಬ್ ಷಾಹೀ ಸೇನಾನಿ ಮೀರ್ ಜುಮ್ಲಾ ೧೬೪೬ ರಲ್ಲಿ ಈ ಪ್ರದೇಶದಲ್ಲಿ ಹಲವಾರು ಧಾಳಿಗಳನ್ನು ನಡೆಸಿದಾಗ ಅವನ ಕೈಗೆ ತೊಂಡಮನಾಡು, ತಿರುಪತಿ, ಚಂದ್ರಗಿರಿಗಳು ಸಿಕ್ಕಿ ಅವನು ಚಿತ್ತೂರು, ಉತ್ತರ ಆರ್ಕಾಟುಗಳನ್ನು ನಾಶಮಾಡಿದ. ಇನ್ನೂ ದಕ್ಷಿಣಕ್ಕಿಳಿದು ಪೊನ್ನೇರಿ, ಪೂಂದಮಲ್ಲಿ, ಕಂಚಿ, ಜಿಂಜಿ, ವಂಡಿವಾಷ್‌ಗಳನ್ನು ಹಿಡಿದ. ಇದಾದ ನಂತರ ಅವನು ಗೋಲ್ಕೊಂಡದ ಆಶ್ರಯವನ್ನು ತೊರೆದು ಮೊಗಲರನ್ನು ಸೇರಿದ. ಮೊಗಲರ ಸಾಮ್ರಾಟ ಜಹಾಂಗಿರ್‌ನು ಕರ್ನಾಟಕವನ್ನು ಮೀರ್‌ಜುಮ್ಲಾನ ಜಾಗೀರು ಎಂದು ಗುರುತಿಸಿದ. ಸೇನಾನಿಯ ಈ ಜಾಗೀರನ್ನು ತುಪಾಕಿ ಕೃಷ್ಣಪ್ಪನು ನೋಡಿಕೊಂಡಿದ್ದ. ೧೬೬೩ ರಲ್ಲಿ ಮೀರ್‌ಜುಮ್ಲಾನ ಮರಣಾನಂತರ ಜಹಗೀರು ನೆಕ್ನಮ್ ಖಾನನಿಗೆ ನೀಡಲ್ಪಟ್ಟು ಅವನು ಚಿಂತಪಲ್ಲಿ ಮಿರ್ಜಾನ ನೆರವಿನಿಂದ ಆಳತೊಡಗಿತ. ಕ್ರಿ.ಶ. ೧೬೭೭ ರಲ್ಲಿ ಹೆಸರಾಂತ ಮರಾಠ ಸೇನಾನಿ ಶಿವಾಜಿಯು ತಿರುಪತಿಯ ಬಳಿಯ ಕಲ್ಲೂರು ಕಣಿವೆಯನ್ನು ಹಾಯ್ದು, ಅರಣಿ, ವೆಲ್ಲೂರು, ಜಿಂಜಿಗಳನ್ನು ಹಿಡಿದ. ಐದು ವರ್ಷಗಳ ನಂತರ ಗೋಲ್ಕೊಂಡದ ಮಂತ್ರಿ ಅಕ್ಕಣ್ಣನು ತಿರುಪತಿಯ ಬಳಿ ಬಂದು ವ್ಯವಸ್ಥೆಯನ್ನುಂಟುಮಾಡಲು ಪ್ರಯತ್ನಿಸಿದ. ಷಹಜಹಾನನ ಮಗ ಔರಂಗಜೇಬನು ಕುತುಬ್‌ಷಾಹೀ ರಾಜ್ಯವನ್ನು ಹಿಡಿದು ಮೊಗಲ್ ಸಾಮ್ರಾಜ್ಯಕ್ಕೆ ಅದನ್ನು ಸೇರಿಸಿಕೊಂಡ. ಇದರಿಂದಾಗಿ ತಿರುಮಲೆ - ತಿರುಪತಿ ಪ್ರಾಂತ್ಯವೂ ಸೇರಿದಂತೆ ಕರ್ನಾಟಕ ಸೀಮೆಯ ಮೊಗಲರ ವಶವಾಯಿತು.

ಕರ್ನಾಟಕದ ನವಾಬರು : ಪೂರ್ವ ಕರ್ನಾಟಕೆಯಲ್ಲಿ ಈ ಆಡಳಿತ ಪರಿವರ್ತನೆಯಿಂದಾಗಿ ಇನ್ನಷ್ಟು ಗೊಂದಲಕರ ಪರಿಸ್ಥಿಯುಂಟಾಯಿತು. ಅನೇಕ ಮಂದಿ ರಕ್ಷಣೆಗಾಗಿ ಆಂಗ್ಲರ ಸೀಮೆಗಳತ್ತ ವಲಸೆ ಹೋದರು. ದಕ್ಷಿಣದ ಸುದೇದಾರರು ಈ ಸೀಮೆಯಲ್ಲಿ ಅಧಿಕಾರ ಚಲಾಯಿಸಿದರು. ಈ ಸೀಮೆ ಹಲವು ಮೊಗಲ್ ಮರಾಠರ ಆಕ್ರಮಣಗಳನ್ನು ನೋಡಿತು. ಮೊಗಲರ ದೊರೆ ಒಂದನೇ ಷಹ ಆಲಂ ಕರ್ನಾಟಿಕ ಪ್ರಾಂತ್ಯವನ್ನು ಒಂದು ಪ್ರತ್ಯೇಕ ನವಾಬಿಯನ್ನಾಗಿ ಪರಿವರ್ತಿಸಿ ಕ್ರಿ.ಶ. ೧೭೧೦ ರಲ್ಲಿ ಸಾದತುಲ್ಲಾಖಾನನನ್ನು ಕರ್ನಾಟಿಕದ ನವಾಬನಾಗಿ ನೇಮಿಸಿದ. ನವಾಬನ ಸಲಹೆಗಾರ ತೋಡರಮಲ್ಲನು ತಿರುಮಲೆಯ ಆಲಯವನ್ನು ಸಂದರ್ಶಿಸಿ ತನ್ನ ತಾಯಿ, ಪತ್ನಿ ಹಾಗೂ ತನ್ನ ವಿಗ್ರಹಗಳನ್ನು ಸ್ಥಾಪಿಸಿದ. ಮೊಗಲರ ದಕ್ಷಿಣದ ಸುಬೇದಾರ ಅಸಫ್ - ಜಾ - ನಿಜಾಮುಲ್ ಮುಲ್ಕನು ಕ್ರಿ.ಶ. ೧೭೨೪ ರಲ್ಲಿ ತಾನು ಸ್ವತಂತ್ರನೆಂದು ಘೋಷಿಸಿಕೊಂಡು ಕರ್ನಾಟಕದ ನವಾಬ ತನ್ನ ಅಧೀನ ಎಂದು ಸಾರಿದ. ಈ ಕಾಲದಲ್ಲಿ ಮರಾಠರು ಪೇಶ್ವೆಗಳ ನಾಯಕತ್ವದಲ್ಲಿ ಪ್ರಬಲರಾಗುತ್ತಿದ್ದು, ಕರ್ನಾಟಕವು ಪೇಶ್ವೆ ಹಾಗೂ ನಿಜಾಮರ ಜಗಳಗಳಲ್ಲಿ ಭಾಗ ಪಡೆಯುವಂತಾಯಿತು. ಅಸಫ್ ಆಲಿಯು ಕ್ರಿ.ಶ. ೧೭೩೩ ರಲ್ಲಿ ದೋಸ್ತ್ ಆಲಿಯನ್ನು ಕರ್ನಾಟಕದ ನವಾಬನನ್ನಾಗಿಸಿದ. ಏಳು ವರ್ಷಗಳ ನಂತರ ರಘೋಜಿಯ ಕಾಲದಲ್ಲಿ ಮರಾಠರ ಸೈನ್ಯವು ಈ ಸೀಮೆಯನ್ನು ಆಕ್ರಮಿಸಿ ತಿರುಮಲೆಯ ಬಳಿಯ ದಾಮಲಚೆರುವು ಯುದ್ಧದಲ್ಲಿ ನವಾಬನನ್ನು ಘೋರ ಸಮರದಲ್ಲಿ ಕೊಂದು, ಸೀಮೆಯನ್ನು ಲೂಟಿಮಾಡಿತು. ಈ ಕಾಲದಲ್ಲಿ ಪೇಶ್ವೆ ಬಾಜೀರಾಯನ ತಾಯಿ ಪತ್ನಿಯರು ತಿರುಮಲೆಯನ್ನು ಸಂದರ್ಶಿಸಿದರು. ಸಫ್ದರ್ ಆಲಿಯು ನಂತರ ನವಾಬನಾದ. ಅವನು ತನ್ನ ಅಧೀನದಲ್ಲಿದ್ದ ತಿರುಮಲೆಯ ಆಲಯದ ಕೋಶಾಗಾರದ ಐವತ್ತುಸಾವಿರ ರೂಪಾಯಿಗಳನ್ನು ಮರಾಠರಿಗೆ ನೀಡಿ ಶಾಂತಿಯನ್ನು ಪಡೆದ. ಕ್ರಿ.ಶ. ೧೭೪೪ ರಲ್ಲಿ ಅನ್ವರುದ್ದೀನನು ನವಾಬನಾದ. ಆದರೆ ಹೈದರಾಬಾದಿನ ನಿಜಾಮನೂ, ಅವನ ಕರ್ನಾಟಕದ ನವಾಬನೂ ತೀರಿಕೊಂಡು ಉತ್ತರಾಧಿಕಾರದ ತುಮುಲ ಎರಡೂ ಕಡೆ ಭುಗಿಲೆದ್ದಿತು. ಇದೇ ಕಾಲದಲ್ಲಿ, ತಮ್ಮ ತವರೂರಿನಲ್ಲಿ ಯುದ್ಧ ಘೋಷಣೆಯಾದದ್ದರಿಂದ ಭಾರತದಲ್ಲಿದ್ದ ಫ್ರೆಂಚರೂ ಆಂಗ್ಲರೂ ಪರಸ್ಪರ ಯುದ್ಧದಲ್ಲಿ ತೊಡಗಿದರು. ಆರ್ಕಾಟಿಗೆ ಮುತ್ತಿಗೆ ಹಾಕಿದ್ದ ಆಂಗ್ಲ ಸೇನಾನಿ ಕ್ಲೈವನಿಗೆ, ಆಂಗ್ಲರು ನವಾಬಪಟ್ಟಕ್ಕೆ ಏರಿಸಿದ ಮಹಮದಾಲಿ (ಅನ್ವರುದ್ದೀನನ ಮಗ) ಯು ತಿರುಮಲೆ ಆಲಯದ ಕೋಶಾಗಾರದಿಂದ ಎರಡು ಲಕ್ಷ ರೂಪಾಯಿಗಳನ್ನು ನೀಡಿದ.

ಕ್ರಿ.ಶ. ೧೭೫೦ ರಲ್ಲಿ ಮಹಮದಾಲಿಯು ತನ್ನ ನೆರವಿಗರಾಗಿದ್ದ ಇಂಗ್ಲೀಷರ ಈಸ್ಟ್ ಇಂಡಿಯಾ ಕಂಪನಿಗೆ ತಿರುಪತಿ - ತಿರುಮಲೆ ದೇವಾಲಯಗಳ ಆದಾಯವನ್ನು ಬರೆದುಕೊಟ್ಟ. ಮುಂದಿನ ಇಪ್ಪತ್ತು ವರ್ಷಗಳು ತಿರುಪತಿ ಸೀಮೆಯಲ್ಲಿ ಅತಿ ಗೊಂದಲಕರ ಪರಿಸ್ಥಿತಿಯಿತ್ತು. ಮಹಮದ್ ಕಮಾಲ್ ಎಂಬ ಸಾಹಸಿ ಈ ಪ್ರದೇಶವನ್ನು ಕೊಳ್ಳೆ ಹೊಡೆದ. ಅವನನ್ನು ಆಂಗ್ಲ ಕಂಪನಿಯ ಸೈನ್ಯ ಹೊಡೆದೋಡಿಸಿತು. ವೆಂಕಟಗಿರಿ, ಕಾರ್ವೇಟಿನಗರ, ಕಾಳಹಸ್ತಿಗಳ ಜಮೀಂದಾರರು ಉಪಟಳ ನೀಡಿದರು. ನವಾಬನ ಸಹೋದರ ನಜೀಬುಲ್ಲಾ ತಿರುಪತಿ ಸೀಮೆಯ ಮೇಲೆ ಧಾಳಿ ನಡೆಸಿ ಹೆದರಿಸಿದ. ಅವನ ಇನ್ನೊಬ್ಬ ಸಹೋದರ ಅಬ್ದುಲ್ಲಾ ವಹಾಬನೂ ಇದೇ ಹಾದಿಯನ್ನು ಹಿಡಿದ. ಇಬ್ಬರು ಮರಾಠಾ ಸರದಾರರು -- ಗೋಪಾಲರಾವ್ ಹಾಗೂ ನಾರಾಯಣ ರಾವ್ - ತಿರುಮಲೆಯ ಆಲಯವನ್ನು ಆಕ್ರಮಿಸಿದರು. ಆದರೆ ಓಡಿಸಲ್ಪಟ್ಟರು. ನಂತರ ಮೈಸೂರು ಸಿಂಹಾಸನವನ್ನು ವಶಪಡಿಸಿಕೊಂಡ ಹೈದರಾಲಿ ಇಲ್ಲಿ ಉಪಟಳವನ್ನುಂಟುಮಾಡಿದ. ನಿಜಾಮನೂ, ಕಂಪನಿಯವರೂ, ಹೈದರಾಲಿ ಮತ್ತು ಅವನ ಮಗ ಟಿಪ್ಪೂಸುಲ್ತಾನನೊಡನೆ ಘನವಾದ ಯುದ್ಧಮಾಡಬೇಕಾಯಿತು. ಮೈಸೂರು ಯುದ್ಧಗಳ ಕಾಲದಲ್ಲಿ ಕಂಪನಿಯು ಕರ್ನಾಟಕದ ಆಳ್ವಿಕೆ ನೇರವಾಗಿ, ಕೈಗೆತ್ತಿಕೊಂಡಿತು.

## ಈ ಕಾಲದಲ್ಲಿ ತಿರುಮಲೆಯ ಆಲಯ

ಈ ಕಾಲದಲ್ಲಿ ತಿರುಮಲೆಯ ಆಲಯಕ್ಕೆ ಕಾಣಿಕೆಯ ರೂಪದಲ್ಲಿ ಬರುವ ಸಂಪತ್ತಿನ ಒಡೆತನಕ್ಕಾಗಿ ಹಲವಾರು ಘರ್ಷಣೆಗಳಾದವು. ಬಹಳ ವರ್ಷಗಳಿಂದಲೂ ಆಲಯದ ಆದಾಯವನ್ನು ಈ ಸೀಮೆಯ ಆಡಳಿತಗಾರರಿಗೆ ನೀಡುವುದು ನಡೆದು ಬಂದಿದ್ದಿತು. ವರ್ಷಕ್ಕೆ ಎರಡು ಲಕ್ಷ ರೂಪಾಯಿಗಳ ಆದಾಯ ಪಡೆಯುತ್ತಿದ್ದ ಕರ್ನಾಟಕದ ನವಾಬ ಮಹಮದಾಲಿಯು ತನಗೆ ನೆರವು ನೀಡಿದ ಆಂಗ್ಲರಿಗೆ ಈ ಅಮೂಲ್ಯ ಸಂಪತ್ತಿನ ಆಸರೆಯನ್ನು ನೀಡಿದ. ಕ್ರಿ.ಶ. ೧೭೫೩ ರಲ್ಲಿ ಮಹಮದ್ ಕಮಾಲ ಸರದಾರ ತಿರುಮಲೆಗೆ ನಡೆದ ಮುತ್ತಿಗೆ ಹಾಕಿದ. ಇದರಿಂದಾಗಿ ಆದಾಯದ ಸೆಲೆ ತಪ್ಪಿಹೋಗಬಹುದೆಂಬ ಭಯ ಮದರಾಸಿನಲ್ಲಿದ್ದ ಕಂಪನಿಯವರಲ್ಲಿ ಉಂಟಾಯಿತು. ಒಂದು ಸಣ್ಣ ತುಕಡಿಯನ್ನು ಕಳುಹಿಸಿದರೂ ಮಹಮದ್ ಕಮಾಲನ ಸೈನ್ಯ ಈ ತುಕಡಿಯನ್ನು ತಿರುಪತಿಯ ಮೈದಾನದಲ್ಲಿಯೇ ಎದುರಿಸಿ ಸೋಲಿಸಿ ಓಡಿಸಿತು. ಮಾರನೆಯ ದಿನ ಮತ್ತೊಂದು ಸೈನ್ಯವನ್ನು ಕಳುಹಿಸಿ ತೀವ್ರ ಸೆಣಸಾಟ ನಡೆಸಲಾಯಿತು. ಸಮರದಲ್ಲಿ ಮಹಮದ್ ಕಮಾಲನು ಏರಿದ್ದ ಆನೆಯನ್ನು ಕೊಂದು ಅವನನ್ನು ಸೆರೆ ಹಿಡಿದು ಅಲ್ಲಿಯೇ ಕೊಲ್ಲಲಾಯಿತು.

ಕ್ರಿ.ಶ. ೧೭೫೪ ರಲ್ಲಿ ಮಹಮದಾಲಿಯು ತನ್ನ ಅಧೀನರಿಂದ ಹೆಚ್ಚಿನ ಕಪ್ಪಗಾಣಿಕೆ ವಸೂಲಿ ಮಾಡಬೇಕೆಂದು ಆಂಗ್ಲರ ನೆರವು ಕೋರಿದನು. ಈ ಸೀಮೆಯಲ್ಲಿದ್ದ ಕಾರ್ವೇಟಿನಗರ ಶ್ರೀಕಾಳಹಸ್ತಿಯ ಪಾಳೆಯಗಾರರು ಹೆಚ್ಚಿನ ರಾಜಕಾಣಿಕೆಯನ್ನು ಕೊಡಲು ನಿರಾಕರಿಸಬಹುದೆಂದು ಆಂಗ್ಲರ ನೆರವು ಬೇಡಲಾಯಿತು. ಎಲ್ಲರೂ ವಿರೋಧವಿಲ್ಲದೆ ವಿಧೇಯರಾದರು. ಕ್ರಿ. ಶ. ೧೭೫೭ ರಲ್ಲಿ ಮಹಮದಾಲಿಯ ಸೋದರ ನಜೀಬುಲ್ಲ ದಂಗೆಯೆದ್ದು ಉತ್ತರಕ್ಕೆ ತಿರುಗಿ ಶ್ರೀಕಾಳಹಸ್ತಿ, ಕಾರ್ವೇಟಿನಗರ ಪಾಳೆಯಗಾರರ ಪ್ರದೇಶಗಳಲ್ಲಿ ಧಾಳಿ ನಡೆಸಿ ನವಾಬನ ಕೋಟೆಯನ್ನು ಹಿಡಿದ. ಮುಂದೆ ನಡೆಯುವ ಬ್ರಹ್ಮೋತ್ಸವದ ಆದಾಯವನ್ನು ಕೊಳ್ಳೆ ಹೊಡೆಯುವ ಅವನ ಉದ್ದೇಶವನ್ನು ಮನಗಂಡು ಮದರಾಸಿನಿಂದ ಒಂದು ಸೈನ್ಯವನ್ನು ಕಳುಹಿಸಿ ತಿರುಮಲೆಯ ಕೆಳಗಿನ ನಗರವನ್ನು ಪಾಳಯವನ್ನಾಗಿ ಮಾಡಲಾಯಿತು. ಇದರಿಂದಾಗಿ ನಿರಾಶನಾದ ನಜೇಬುಲ್ಲನು ಧಾಳಿಯನ್ನು ಹಿಂದೆಗೆದುಕೊಂಡು ಆದಷ್ಟು ತಿರುಮಲೆಯ ಯಾತ್ರಿಕರನ್ನು ತಿರುಮಲೆ ಸೇರದಂತೆ ಓಡಿಸಿದ. ಇದರಿಂದಾಗಿ ಆ ವರ್ಷ ತಿರುಮಲೆಯ ಆದಾಯ ಸಾಕಷ್ಟು ಕಡಿಮೆಯಾಯಿತು. ಇದೇ ವರ್ಷದಲ್ಲಿ ಮರಾಠರ ಬಲವಂತರಾಯನ ಸೈನ್ಯವ ಧಾಳಿಯನ್ನೂ ಕರ್ನಾಟಕ ಎದುರಿಸಬೇಕಾಯಿತು. ಬಲವಂತರಾಯನು ಕಡಪವನ್ನು ಆಕ್ರಮಿಸಿ ನವಾಬ ಅಬ್ದುಲ್ ಮಜೀದ್ ಖಾನನನ್ನು (ಕ್ರಿ.ಶ. ೧೭೫೩ - ೧೭೫೭) ಕೊಂದುಹಾಕಿದ. ಮಜೀದಖಾನನ ಉತ್ತರಾಧಿಕಾರಿಯಾಗಿ ಮೂಚಾಮಿಯಾ ಅಥವಾ ಮುಹಸೀನ್ ಖಾನನು ಬಂದ. ಇವನು ಗುರ್‍ರಂಕೊಂಡವನ್ನು ಮರಾಠರಿಗೆ ಒಪ್ಪಿಸಿ ಶಾಂತಿಯನ್ನು ಪಡೆದ. ಬಲವಂತರಾಯನು ಆ ನಂತರ ಪಲಮನೇರಿನ ತಲಪುಲಗುಟ್ಟದ ಬಳಿಯ ಕಡಪನಟ್ಟಂ ಕೋಟೆಯನ್ನು ಹಿಡಿದ. ನಂತರ ಪುಂಗನೂರು ಪಾಳೆಯಗಾರನನ್ನು ಕೊಂದು ಅದನ್ನೂ ವಶಪಡಿಸಿಕೊಂಡ.

ಕ್ರಿ.ಶ. ೧೭೫೮ ರಲ್ಲಿ ಆರ್ಕಾಟ್ ನವಾಬನ ಮತ್ತೊಬ್ಬ ಸೋದರ ಅಬ್ದುಲ್ ವಹಾಬನು ತಿರುಪತಿ ಸೀಮೆಯಲ್ಲಿ ಧಾಳಿಯಿಟ್ಟು ದೆದರಿಸಿದ. ತನ್ನ ಸೋದರನೊಡನೆ ಜಗಳವಾಡಿದ ಅಬ್ದುಲ್ ವಹಾಬನು ತನ್ನ ತಾಯಿ ಮತ್ತು ಮಗನೊಡನೆ ಚಿತ್ತೂರು ಸೀಮೆಗೆ ಓಡಿಬಂದ. ಚಿತ್ತೂರಿನ ಸ್ಥಳೀಯ ಪಾಳೆಯಗಾರರಿಂದ ಆದಷ್ಟು ಪೇಶ್‌ಕಶ್ ರಕಮನ್ನು ಪಡೆದು ತನ್ನ ಹಾಗೂ ಕಿರಿದಾದ ತನ್ನ ಪರಿವಾರವನ್ನು ನೋಡಿಕೊಂಡಿದ್ದ. ನಂತರ ತಿರುಪತಿಯನ್ನು ಆಕ್ರಮಿಸಿ ತನ್ನ ಅದೃಷ್ಟವನ್ನು ಪರೀಕ್ಷೆಮಾಡಿ ನೋಡಬೇಕೆಂದುಕೊಂಡ. ಸಾಕಷ್ಟು ಸೈನ್ಯವನ್ನು ಕೂಡಿಸಿಕೊಂಡು ಬೆಟ್ಟದ ತಪ್ಪಲಿನ ನಗರವನ್ನು ಭೀತಗೊಳಿಸಿದರೂ, ಆಂಗ್ಲ ಸೈನ್ಯ ಬರುತ್ತಿದೆ ಎಂಬ ವಾರ್ತೆಯಿಂದ ಮೇಲಿನ ಆಲಯವನ್ನು ಸೂರೆಮಾಡಲಿಲ್ಲ. ಹಿಂದಿರುಗಿ ಚಂದ್ರಗಿರಿ ಕೋಟೆಯನ್ನು ಆಕ್ರಮಿಸಿ ಸೂಕ್ತ ಸಮಯಕ್ಕಾಗಿ ಕಾದು ಕುಳಿತ. ಹೈದರಾಬಾದಿನಿಂದ ಹಿಂದಿರುಗುತ್ತಿದ್ದ ಫ್ರೆಂಚ್ ದಳಪತಿ ಬುಸ್ಸಿಯು ತಿರುಪತಿ ಪಟ್ಟಣಕ್ಕೆ ಮುತ್ತಿಗೆ ಹಾಕಿ, ಅಲ್ಲಿದ್ದ ಆಂಗ್ಲರ ಅಧಿಕಾರಿಯನ್ನು ಆಲಯದ ಆದಾಯವನ್ನು ತನ್ನ ಪರಮಾಡಲು ಒತ್ತಾಯಿಸಿದ. ಅಬ್ದುಲ್ ವಹಾಬನು ಬುಸ್ಸಿಯೊಡನೆ ಸೇರಿ ದಕ್ಷಿಣಕ್ಕೆ ಬಂದು ಆಲಯದ ಆದಾಯ ತನ್ನ ಪರವಾಗಬಹುದೆಂದು ನಿರೀಕ್ಷಿಸಿದ. ಆದರೆ ಬುಸ್ಸಿಯಿಂದ ಪ್ರಯೋಜನವಾಗದೆ ಚಂದ್ರಗಿರಿಗೆ ಹಿಂದಿರುಗಬೇಕಾಯಿತು. ಮತ್ತೆ ೧೭೫೮ ರ ಡಿಸೆಂಬರಿನಲ್ಲಿ ಮರಾಠರ ದೊಡ್ಡ ಸೈನ್ಯವು ಗೋಪಾಲರಾಯನ ನೇತೃತ್ವದಲ್ಲಿ ತಿರುಪತಿಯನ್ನು ಸೇರಿ ಬೆಟ್ಟವನ್ನೇರಿ ೧೭೫೯ ರ ಏಪ್ರಿಲ್ ತಿಂಗಳಿನ ಆದಾಯವನ್ನು ಸೂರೆಮಾಡಲು ಆಲಯವನ್ನು ವಶಪಡಿಸಿಕೊಂಡಿತು. ಆದರೆ ಸೈನ್ಯದ ಮುಖ್ಯ ಭಾಗವನ್ನು ಹಿಂದಕ್ಕೆ ಕಳುಹಿಸಿದ್ದರಿಂದ ಒಂದು ಸಣ್ಣ ಪಡೆಯು ನಾರಾಯಣಶಾಸ್ತ್ರಿಯ ನೇತೃತ್ವದಲ್ಲಿ ಆಲಯದ ವಿಚಾರಣೆ ನಡೆಸುತ್ತಿತ್ತು. ಅಬ್ದುಲ್‌ವಹಾಬನು ತನ್ನ ಸೈನ್ಯದೊಡನೆ ಬಂದು ಈ ಸಣ್ಣ ಪಡೆಯನ್ನು ಓಡಿಸಿ ವಿಷಯನ್ನು ಮದರಾಸು ಸರ್ಕಾರಕ್ಕೆ ನಿವೇದಿಸುತ್ತ ಆಲಯದ ಆದಾಯನ್ನು ತನ್ನ ಪರವಾಗಿಸಲು ಬೇಡಿದ. ಅವನ ಬೇಡಿಕೆಯನ್ನು ತಿರಸ್ಕರಿಸಿ, ಹಿಂದಿನ ಅಧಿಕಾರಿಯನ್ನೇ ಪುನಃ ನಿಯಮನ ಮಾಡಲಾಯಿತು.

ನಾರಾಯಣಶಾಸ್ತ್ರಿಯು ತಿರುಪತಿಯ ಬಳಿಯ ಕರಕಂಬಾಡಿ ಪಾಳಯಕ್ಕೆ ಓಡಿಬಂದಿದ್ದ. ೧೭೫೯ ರ ಜುಲೈ ತಿಂಗಳಿನಲ್ಲಿ ಕರಕಂಬಾಡಿ ಪಾಳೆಯಗಾರನ ನೆರವಿನಿಂದ ಅವನು ಪುನಃ ಬೆಟ್ಟವನ್ನೇರಿ ಆಲಯವನ್ನು ಕೈವಶಮಾಡಿಕೊಂಡ. ಅವನನ್ನು ಪದಚ್ಯುತಗೊಳಿಸಲು ಒಂದು ಸೈನ್ಯ ಬಂದಿತಾದರೂ ಅದು ಸೋತು ಹಿಂದಿರುಗಿತು. ಸೈನ್ಯ ಸಹಾಯಕ್ಕಾಗಿ ಮದರಾಸಿಗೆ ಅರ್ಜಿಯನ್ನು ಬರೆದುಕೊಳ್ಳಲಾಯಿತು. ಸೈನ್ಯದೊಡನೆ ಬಂದ ಆಂಗ್ಲ ಸೇನಾನಿ ಮೇಜರ್ ಕಲ್ಲಾಡನು ಶತ್ರುಗಳ ಗಮನವನ್ನು ಸೆಳೆಯಲು ದಾರಿ ತಪ್ಪಿಸುವಂತೆ ಕರಕಂಬಾಡಿಯ ಪಾಳಯವನ್ನು ಆಕ್ರಮಿಸಿದ. ಕರಕಂಬಾಡಿ ಗ್ರಾಮವನ್ನು, ಅದರ ಪಾಳೆಯಗಾರನನ್ನು ಕೊಂದನಂತರ ಅಗ್ನಿಗಾಹುತಿ ಮಾಡಲಾಯಿತು. ಇದರಿಂದಾಗಿ ಮರಾಠರು ಮತ್ತವರ ಬೆಂಬಲಿಗರ ಧೈರ್ಯವುಡುಗಿ ಮಾರನೆಯ ದಿನದ ಆಲಯದ ಬ್ರಿಟಿಷರ ಆಕ್ರಮಣ ಸಫಲವಾಯಿತು. ನಾರಾಯಣ ಶಾಸ್ತ್ರಿಯು ಹಿಂದೆಗೆದ. ಹಳೆಯ ಆದಾಯ ವಸೂಲಿ ಅಧಿಕಾರಿಯನ್ನು ಪುನಃ ಎತ್ತಿ ಹಿಡಿಯಲಾಯಿತು. ಅವನ ರಕ್ಷಣೆಗಾಗಿ ಒಂದು ಸಣ್ಣ ಸೈನ್ಯವನ್ನು ಬಿಟ್ಟು ಆಂಗ್ಲರು ಹಿಂದಿರುಗಿದರು. ಮತ್ತೆ ತಿರುಪತಿಯು ನಿಜಾಂ ಆಲಿಯ ಹಾಗೂ ಆಂಗ್ಲರ ಸಮರಭೂಮಿಯಾಯಿತು. ನಿಜಾಮಾಲಿಯ ಸೈನ್ಯ ಸೋತು ಶ್ರೀಕಾಳಹಸ್ತಿಯ ಮೂಲಕ ನೆಲ್ಲೂರಿನತ್ತ ಓಡಿಹೋಯಿತು.

ಕಂಪನಿಯ ಪಾತ್ರ : ಮೈಸೂರಿನ ಯುದ್ಧಗಳಾದ ಮೇಲೆ ಕಂಪನಿಯು ಕರ್ನಾಟಕ ಸೀಮೆಯಲ್ಲಿ ವ್ಯವಸ್ಥೆಯನ್ನುಂಟಾಗಿಸಲು ಪ್ರಯತ್ನಿಸಿತು. ಮಹಮದಾಲಿಯ ಉತ್ತರಾಧಿಕಾರಿಗಳು ಇದನ್ನು ವಿರೋಧಿಸಿದರು. ಕಂಪನಿಯ ನವಾಬನಿಗೆ ಬಲಾತ್ಕಾರದಿಂದ ಪಿಂಛಣಿಯನ್ನು ನೀಡಿ ಕ್ರಿ.ಶ. ೧೮೦೧ ರಲ್ಲಿ ಈ ಪ್ರದೇಶದ ಆಡಳಿತವನ್ನು ವಹಿಸಿಕೊಂಡಿತು. ಹಿಂದೂ ಆಲಯಗಳ ಆಡಳಿತವನ್ನು ನಡೆಸಲು ಇಷ್ಟಪಡದ ಕಂಪನಿಯು ತಿರುಮಲೆ - ತಿರುಪತಿ ಆಲಯಗಳನ್ನು ಕ್ರಿ.ಶ. ೧೮೪೩ ರಲ್ಲಿ ಮಹಂತರಿಗೆ ಒಪ್ಪಿಸಿತು.

ಕ್ರಿ.ಶ. ೧೯೩೩ ರಲ್ಲಿ ಮದರಾಸು ಸರ್ಕಾರವು ಆಲಯಗಳನ್ನು ಅಧೀನಪಡಿಸಿಕೊಂಡು, ಒಂದು ಧರ್ಮಕರ್ತರ ಮಂಡಳಿಯ ಕೈಗೆ ಆಡಳಿತವನ್ನೊಪ್ಪಿಸಿತು. ಆಂಧ್ರಪ್ರದೇಶದ ಅವತರಣವಾದ ಮೇಲೆ ಈ ಆಲಯಗಳು ಆಂಧ್ರಪ್ರದೇಶದ ಸರ್ಕಾರದ ವಶಕ್ಕೆ ಬಂದಿತು. ♣

# ವಿವಿಧ ಹಂತಗಳಲ್ಲಿ ತಿ.ತಿ.ದೇ. ಕಲ್ಯಾಣಮಂಟಪಗಳು

ತಿ. ತಿ. ದೇವಸ್ಥಾನಗಳು ತಮ್ಮ ಧರ್ಮ ಪ್ರಚಾರಪರಿಷತ್ ಕಾರ್ಯಕ್ರಮಗಳಿಗಾಗಿ ಹಾಗೂ ಸ್ಥಳೀಯ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ವಿವಿಧ ಸ್ಥಳಗಳಲ್ಲಿ ಕಲ್ಯಾಣಮಂಟಪಗಳನ್ನು ನಿರ್ಮಿಸುತ್ತಿದ್ದು 1995 - 96 ರಲ್ಲಿ ವಿವಿಧ ಹಂತಗಳಲ್ಲಿನ ಆಂಧ್ರದ ತೆಲಂಗಾಣ ಪ್ರದೇಶದ ಕಲ್ಯಾಣಮಂಟಪ ನಿರ್ಮಾಣ ವಿವರ ಈ ರೀತಿಯಿದೆ.

## ಶಂಕುಸ್ಥಾಪನೆ ಆದ ಕಲ್ಯಾಣ ಮಂಟಪಗಳು

| ಸ್ಥಳದ ಹೆಸರು | ಜಿಲ್ಲೆ | ಅಂದಾಜು ವೆಚ್ಚ | ದಿನಾಂಕ | ಶಂಕುಸ್ಥಾಪಕರು |
|---|---|---|---|---|
| ಚೌತುಪ್ಪಳ್ | ನಲ್ಗೊಂಡ | 18 ಲಕ್ಷರೂ. | 27-11-95 | ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬುನಾಯ್ಡು. |
| ಸತ್ತುಪಲ್ಲಿ | ಖಮ್ಮಂ | 24 ಲಕ್ಷರೂ. | 27-12-95 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |
| ಧರ್ಮಪೇಟೆ | ಖಮ್ಮಂ | 18 ಲಕ್ಷರೂ. | 27-12-95 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |
| ಸೂರ್ಯಾಪೇಟ | ನಲ್ಗೊಂಡ | 26.50 ಲಕ್ಷರೂ. | 9-1-96 | ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರಬಾಬುನಾಯ್ಡು |
| ಭೋಂಗೀರ್ | ನಲ್ಗೊಂಡ | 18 ಲಕ್ಷರೂ. | 27-2-96 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |
| ಮೇಡ್ಚಲ್ | ಮೇಡಕ್ | 18 ಲಕ್ಷರೂ. | 29-2-96 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |

## ಉದ್ಘಾಟನೆಯಾದ ಕಲ್ಯಾಣ ಮಂಟಪಗಳು

| ಸ್ಥಳದ | ಜಿಲ್ಲೆ | ಅಂದಾಜು ವೆಚ್ಚ | ದಿನಾಂಕ | ಉದ್ಘಾಟಕರು |
|---|---|---|---|---|
| ಗಡ್ಡಿ ಅನ್ನಾರಂ | ಹೈದರಾಬಾದ್‌ನಗರ | 10 ಲಕ್ಷರೂ. | 6-12-95 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |
| ಜಿನ್ನಾರಂ | ಮೇಡಕ್ | 15 ಲಕ್ಷರೂ. | 21-12-95 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |
| ಕಲ್ಲೂರು | ಖಮ್ಮಂ | 17 ಲಕ್ಷರೂ. | 27-12-95 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |
| ಜೋಗಿಪೇಟೆ | ಮೇಡಕ್ | 18 ಲಕ್ಷರೂ. | 21-2-96 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |
| ಜನಗಾವ್ | ವರಂಗಲ್ | 20.50 ಲಕ್ಷರೂ. | 3-3-96 | ಕೇಂದ್ರ ನೀರಾವರೀ ಉಪಮಂತ್ರಿ ಶ್ರೀ ಪಿ. ವಿ. ರಂಗಯ್ಯನಾಯ್ಡು. |
| ದೇವರಕೊಂಡ | ನಲ್ಗೊಂಡ | 13 ಲಕ್ಷರೂ. | 13-3-96 | ಆಂಧ್ರಪ್ರದೇಶ ಮುಜರಾಯಿಮಂತ್ರಿ ಶ್ರೀ ಎಸ್. ಸತ್ಯನಾರಾಯಣರಾವ್. |



## ತಿರುಮಲೆಯಲ್ಲಿ
## ಈ ಬಾರಿ ಎರಡು ಬ್ರಹ್ಮೋತ್ಸವಗಳು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಬ್ರಹ್ಮೋತ್ಸವಗಳು ಈ ವರ್ಷ ಸೆಪ್ಟೆಂಬರ್ 15 ರಿಂದ 23 ರವರೆಗೆ ಹಾಗೂ ಅಕ್ಟೋಬರ್ 13 ರಿಂದ 21 ರವರೆಗೆ ಎರಡು ಬಾರಿ ನಡೆಯುವುದೆಂದು ಗುರುತಿಸಿದ ನಂತರ ಅದರ ವ್ಯಾಪಕ ಏರ್ಪಾಡುಗಳಿಗಾಗಿ ಪೂರ್ವಭಾವಿ ಸಭೆಯನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು.

ದೇಶದ ತುಂಬ ಜನ ದೂರದರ್ಶನದಲ್ಲಿ ಬ್ರಹ್ಮೋತ್ಸವಗಳನ್ನು ವೀಕ್ಷಿಸಲು ಅನುಕೂಲವಾಗುವಂತೆ ದೂರದರ್ಶನದಲ್ಲಿ ಕಾರ್ಯಕ್ರಮಗಳನ್ನು ಪ್ರಸಾರ ಮಾಡಲು ಹಿಂದಿನ ವರ್ಷದಂತೆಯೇ ಈ ಬಾರಿಯೂ ಆಹ್ವಾನ ನೀಡಲಾಗುವುದು. ತಿರುಮಲೆಯ ನೀರಿನ ಸಮಸ್ಯೆಯನ್ನು ಕುರಿತು ವಿಚಾರ ನಡೆದು, ರಾಜ್ಯ ನೀರಾವರೀ ಇಲಾಖೆಯವರ ಮೂಲಕ ಅಧಿಕ ಸಂಖ್ಯೆಯ ಬೋರ್‌ಗಳನ್ನು ಹಾಕಿಸಲು ತೀರ್ಮಾನಿಸಲಾಯಿತು. ಹಿಂದೆ ನಡೆದ ಕುಂದು ಕೊರತೆಗಳನ್ನು ಗಮನಿಸಿ ಈ ಬಾರಿ ಪುನರಾವೃತವಾಗದಂತೆ ನೋಡಿಕೊಳ್ಳಲಾಗುವುದು ಎಂದು ಕಾರ್ಯನಿರ್ವಹಣಾಧಿಕಾರಿಗಳು ತಿಳಿಸಿದರು. ತಿರುಮಲೆಯಲ್ಲಿನ ಸಂಚಾರ ವ್ಯವಸ್ಥೆಯನ್ನು ಕ್ರಮಬದ್ಧಗೊಳಿಸಲು ಇಲ್ಲಿನ ರಿಂಗ್‌ರೋಡ್ ಅನ್ನು ಡಬಲ್ ರಸ್ತೆಯನ್ನಾಗಿ ಅತ್ಯವಸರ ಪರಿವರ್ತನೆ ಗೊಳಿಸಲಾಗುತ್ತಿದೆ. ರಾಂಬಗೀಚಾ ಪ್ರಾಂತ್ಯದ ಮಾರ್ಗವನ್ನು ಅಗಲಗೊಳಿಸುವ ಕಾರ್ಯಕ್ರಮ ಬ್ರಹ್ಮೋತ್ಸವಕ್ಕೆ ಮೊದಲು ಪೂರ್ತಿಯಾಗುವುದು. ವಾಹನಗಳನ್ನು ನಿಲ್ಲಿಸಲು ಮೂರು ಸ್ಥಳಗಳಲ್ಲಿ ಏರ್ಪಾಡು ಮಾಡಲಾಗಿದೆ. ಈ ಸಮಾವೇಶದಲ್ಲಿ ತಿರುಮಲೆಯ ಜೆ. ಇ. ಓ. ಶ್ರೀ ಬಾಲಸುಬ್ರಹ್ಮಣ್ಯಂ, ಚೀಫ್ ಸೆಕ್ಯೂರಿಟಿ ಆಫೀಸರ್ ಶ್ರೀ ಕೃಷ್ಣಂ ರಾಜು, ಆಲಯ ಡೆ.ಇ.ಓ. ಶ್ರೀ ಸುಬ್ರಹ್ಮಣ್ಯಂ, ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್ ಗೌಡ್ ಮತ್ತಿತರ ಹಿರಿಯ ಅಧಿಕಾರಿಗಳು ಪಾಲುಗೊಂಡಿದ್ದರು.

ಬ್ರಹ್ಮೋತ್ಸವಗಳಲ್ಲಿ ಈ ಬಾರಿ ಭಾರೀ ಬಂದೋಬಸ್ತು ಏರ್ಪಾಡುಗಳನ್ನು ಕೈಗೆತ್ತಿಕೊಳ್ಳಲು ಏರ್ಪಾಡುಗಳು ನಡೆದಿವೆ. ಪೋಲೀಸರು, ಹೋಂಗಾರ್ಡ್‌ಗಳು ಸ್ಕೌಟ್‌ಗಳನ್ನು ಹೆಚ್ಚಿನ ವ್ಯವಸ್ಥೆಯಿಂದ ಬಳಸಬೇಕೆಂದು ತೀರ್ಮಾನಿಸಲಾಗಿದೆ. ಹಿಂದಿನ ಬಾರಿಗಿಂತಲೂ ಹೆಚ್ಚಿನ ವಿದ್ಯುತ್ ದೀಪಾಲಂಕರಣ ಪುಷ್ಪಾಲಂಕರಣ ಮಾಡಲೂ, ಭಕ್ತರನ್ನು ಆಕರ್ಷಿಸುವ ರೀತಿಯಲ್ಲಿ ರಥ ವೀಧಿಗಳಲ್ಲಿ ಏಳು ದ್ವಾರಗಳನ್ನು ಏರ್ಪಾಡು ಮಾಡಲು ತೀರ್ಮಾನಿಸಲಾಗಿದೆ. ಭಕ್ತರು ಕುಳಿತು ನೋಡಲು ಅನುಕೂಲವಾಗುವ ಗ್ಯಾಲರಿಗಳನ್ನು ಮತ್ತಷ್ಟು ಸುಭದ್ರ, ಸುವ್ಯವಸ್ಥಿತಗೊಳಿಸಲು ತೀರ್ಮಾನಿಸಲಾಗಿದೆ. ಆನೆಯ ಅಂಬಾರಿಗಳು, ಉಡುಪಿ ವಾದ್ಯಗಳು, ವಿವಿಧ ವೇಷಗಳನ್ನು ಏರ್ಪಾಡು ಮಾಡಲು ತೀರ್ಮಾನಿಸಲಾಗಿದೆ ಎಂದು ತಿಳಿಸಲಾಗಿದೆ.



## ಯಶಸ್ವಿ ಬ್ರಹ್ಮೋತ್ಸವಗಳು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವಗಳು ಮೇ ತಿಂಗಳಿನಲ್ಲಿ 23 ರಂದು ಆರಂಭವಾಗಿ ಜೂನ್ ಒಂದರಂದು ಯಶಸ್ವಿಯಾಗಿ ಪೂರ್ಣಗೊಂಡವು. ಕಪಿಲತೀರ್ಥದ ಬಳಿ ಪೂಜಾದಿಗಳನ್ನು ನಿರ್ವಹಿಸಿದ ನಂತರ ಪವಿತ್ರ ಜಲದಲ್ಲಿ ಚಕ್ರಸ್ನಾನದೊಡನೆ ಮುಕ್ತಾಯವಾದ ಬ್ರಹ್ಮೋತ್ಸವಗಳು ಹಿಂದಿನ ವರ್ಷಗಳಿಗಿಂತ ಹೆಚ್ಚು ಚೆನ್ನಾಗಿ ನಡೆಯಿತು. ಇದರಂಗವಾಗಿ ನಡೆದ ಗರುಡೋತ್ಸವ (ಮೇ-28), ರಥೋತ್ಸವಗಳು (ಮೇ - 31) ಎಂದಿಗಿಂತ ಹೆಚ್ಚಿನ ಜನವನ್ನು ಆಕರ್ಷಿಸಿದ್ದು ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆದವು.

# ವಾರ್ತಾಲಹರಿ

## ಸಂರಕ್ಷಕ ದಳಕ್ಕೆ ಶಿಕ್ಷಣ ಶಿಬಿರ

ತಿ. ತಿ. ದೇವಸ್ಥಾನಗಳ ಸಂರಕ್ಷಕ ವಿಭಾಗದ ರಕ್ಷಕರಿಗೆ ತಿ. ತಿ. ದೇವಸ್ಥಾನಗಳ ಬಗ್ಗೆ ಹೆಚ್ಚಿನ ಅವಗಾಹನೆಯನ್ನುಂಟಾಗಿಸುವಲ್ಲಿ, ಯಾತ್ರಿಕಾವಸರಗಳ ಘನಿಷ್ಠ ತಿಳಿವನ್ನು ನೀಡುವಲ್ಲಿ ಅಗತ್ಯವಾದ ಶಿಕ್ಷಣ ಶಿಬಿರವನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ಅವರ ಆದೇಶದ ಮೇರೆಗೆ, ಜೂನ್ 17 ರಂದು ಆರಂಭಿಸಲಾಗಿದೆ. ಪ್ರಸ್ತುತ ಶಿಕ್ಷಣಾರ್ಥಿಗಳ ಶಿಬಿರದಲ್ಲಿ ಐವತ್ತೇಳು ಮಂದಿ. ಸೆಕ್ಯೂರಿಟಿ ಗಾರ್ಡ್‌ಗಳು ಶಿಕ್ಷಣ ಪಡೆಯುತ್ತಿದ್ದಾರೆ. ಶಿಕ್ಷಣ ಶಿಬಿರದ ಮೇಲ್ವಿಚಾರಣೆಯನ್ನು ತಿ.ತಿ.ದೇ. ಚೀಫ್ ಸೆಕ್ಯೂರಿಟಿ ಆಫೀಸರ್ ಕೃಷ್ಣಂ ರಾಜು, ವಿಜಿಲೆನ್ಸ್ ಹಾಗೂ ಸೆಕ್ಯೂರಿಟಿ ಆಫೀಸರ್ ಶ್ರೀ ರಾಮಕೃಷ್ಣರಾವ್ ಅವರು ವಹಿಸಿದ್ದಾರೆ. ಬೆಳಿಗ್ಗೆ ಪೋಲೀಸು ಶಾಖೆಯವರಿಂದ ದೈಹಿಕ ಶಿಕ್ಷಣದ ತರಗತಿಗಳು ನಂತರ ತಿ. ತಿ. ದೇವಸ್ಥಾನಗಳ ವಿವಿಧ ವಿಭಾಗಗಳ ಬಗ್ಗೆ ಪರಿಚಯ, ಸಂರಕ್ಷಣ ವಿಧಾನಗಳು - ಮೊದಲಾಗಿ ತರಗತಿಗಳು ಒಂದು ತಿಂಗಳ ಕಾಲ ನಡೆಯುತ್ತವೆ.



ತಿರುಮಲೆಯಲ್ಲಿ ರಾಜ್ಯಪಾಲರು ಹಾಗೂ ಶ್ರೀ ರಾಂಬಾಬು.

ತಿರುಚಾನೂರು ಆಲಯದಲ್ಲಿ ರಾಜ್ಯಪಾಲರು ಹಾಗೂ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣರಾವ್.



## ವಿ.ಕೋಟೆಯಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪ

ತಿ. ತಿ. ದೇವಸ್ಥಾನಗಳ ಕಲ್ಯಾಣ ಮಂಟಪ ಕುಪ್ಪಂ ಬಳಿಯ ವಿ.ಕೋಟೆಯಲ್ಲಿ ಸುಮಾರು ನಲವತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗಿದ್ದು, ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಚಂದ್ರ ಬಾಬುನಾಯುಡು ಅವರು ಜೂನ್ 22 ರಂದು ಈ ಕಲ್ಯಾಣ ಮಂಟಪವನ್ನು ಉದ್ಘಾಟಿಸಿದರು. ದ್ರಾವಿಡ ವಿಶ್ವವಿದ್ಯಾನಿಲಯದ ಉದ್ಘಾಟನೆಯಲ್ಲಿ ಪಾಲು ಗೊಂಡ ಮುಖ್ಯಮಂತ್ರಿಗಳು, ತಿ.ತಿ.ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್, ಡಾ|| ಮೇಡಸಾನಿ ಮೋಹನ್ ಮೊದಲಾದವರು ಭಾಗವಹಿಸಿದ್ದ ಕಲ್ಯಾಣ ಮಂಟಪ ಆರಂಭೋತ್ಸವ ದಲ್ಲಿ ಮಾತನಾಡುತ್ತ ಈ ಭಾಗದ ಜನತೆಯ ಸಾಂಸ್ಕೃತಿಕ, ಧಾರ್ಮಿಕ ಕಾರ್ಯಕ್ರಮಗಳ ನಡಾವಳಿಗೆ ಅಗತ್ಯವಾದ ಇಂತಹ ಒಂದು ಭವನದ ಅಗತ್ಯ ಇದರಿಂದ ಪೂರೈಕೆಯಾಗಿದೆ, ಇದರ ಪೂರ್ಣ ಪ್ರಯೋಜನವನ್ನು ಜನತೆ ಪಡೆಯುವಂತಾಗಲಿ ಎಂದು ಹಾರೈಸಿದರು.

## ಸ್ವಾಮಿ ಸೇವೆಯಲ್ಲಿ ರಾಜ್ಯಪಾಲರು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಲು ಆಂಧ್ರಪ್ರದೇಶದ ರಾಜ್ಯಪಾಲ ಶ್ರೀ ಕೃಷ್ಣಕಾಂತ್ ಅವರು ಕುಟುಂಬ ಸಹಿತರಾಗಿ ಮೇ ಮೂವತ್ತರಂದು ತಿರುಮಲೆಗೆ ಆಗಮಿಸಿ ಅಂದು ಸಂಜೆ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಬೆಟ್ಟದ ಮೇಲಿನ ಪದ್ಮಾವತೀ ಅತಿಥಿಗೃಹದಲ್ಲಿ ಉಳಿದುಕೊಂಡ ರಾಜ್ಯಪಾಲರು ತಿರುಮಲೆಗೆ ಐದು ಕಿಲೋಮೀಟರ್ ದೂರದ ನಾರಾಯಣಗಿರಿ ಪ್ರಾಂತ್ಯಕ್ಕೆ ಬಂದು ಸ್ವಾಮಿ ಪಾದಗಳನ್ನು ಸಂದರ್ಶಿಸಿದರು. ಅದೇ ದಾರಿಯಲ್ಲಿದ್ದ ಸಹಜ ಭೌಗೋಳಿಕ ಶಿಲಾತೋರಣವನ್ನು, ಧರ್ಮಗಿರಿಯ ವೇದ ವಿದ್ಯಾಲಯವನ್ನು ಸಂದರ್ಶಿಸಿ ಹಿಂದಿರುಗಿದ ನಂತರ ಪಾಪನಾಶನಂಗೂ ಹೋಗಿ ಬಂದು ಸಂಜೆ ಸ್ವಾಮಿಯನ್ನು ಸಂದರ್ಶಿಸಿದರು. ರಾಜ್ಯಪಾಲ ದಂಪತಿಗಳು ಶುಕ್ರವಾರ ಬೆಳಗ್ಗೆ ಸ್ವಾಮಿಯ ಅಭಿಷೇಕದಲ್ಲಿ ಪಾಲುಗೊಂಡಿದ್ದರು. ಅನಂತರ ತಿರುಪತಿಯ ಮೂಲಕ ತಿರುಚಾನೂರಿಗೆ ಆಗಮಿಸಿ ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲೂ ಆರಾಧನೆ, ಅರ್ಚನೆಯನ್ನು ಮಾಡಿದರು.



## ಸ್ವಾಮಿ ದರ್ಶನಕ್ಕೆ ಸರ್ವೋಚ್ಚನ್ಯಾಯಾಧೀಶರು

ಜೂನ್ 25 ರಂದು ಮಂಗಳವಾರ ಸಾಯಂಕಾಲ ಭಾರತದ ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಹನ್ಸಾರಿಯಾ ಹಾಗೂ ನ್ಯಾಯಮೂರ್ತಿ ಜೀವನ್ ರೆಡ್ಡಿಯವರುಗಳು ತಿರುಮಲೆಗೆ ಆಗಮಿಸಿದರು. ನ್ಯಾಯಧೀಶದ್ವಯರಿಗೆ ತಿರುಮಲೆಯಲ್ಲಿನ ಶ್ರೀ ಪದ್ಮಾವತೀ ಅತಿಥಿಗೃಹದಲ್ಲಿ ವಸತಿ ಏರ್ಪಾಡು ಮಾಡಲಾಗಿದ್ದು, ತಿರುಮಲೆಯ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಆಲಯ ಡೆ. ಇ. ಓ. **ಶ್ರೀ ಸುಬ್ರಹ್ಮಣ್ಯಂ ಅವರುಗಳು ಸ್ವಾಗತಿಸಿ** ದರು.

## ಪದವಿ ವಿರಮಣ



ತಿ.ತಿ.ದೇ.ಗಳ **ವಿಶೇಷದರ್ಜೆಯ ಡೆ.ಇ.ಓ.** ಶ್ರೀ ವಾಸುದೇವನ್ **ಮೇ** ಮೂವತ್ತೊಂದ ರಂದು ಪದವಿ ನಿವೃತ್ತಿಯನ್ನು ಪಡೆದರು.

1958 ರಲ್ಲಿ ತಿ.ತಿ.ದೇ. ಗಳಲ್ಲಿ ಕಿರಿಯ ದರ್ಜೆಯ ಗುಮಾಸ್ತರಾಗಿ ಉದ್ಯೋಗ ಆರಂಭಿಸಿದ ಶ್ರೀಯುತರು ಕ್ರಮೇಣ ಪದೋನ್ನತಿಯನ್ನು ಪಡೆದು 1972 ರಲ್ಲಿ ಎ. ಇ.ಓ ಆಗಿಯೂ 1987 ರಲ್ಲಿ ಡೆ.ಇ.ಓ. ಆಗಿಯೂ 1994 ರಿಂದ ವಿಶೇಷ ದರ್ಜೆಯ ಡೆಪ್ಯೂಟಿ ಇ.ಓ. ಆಗಿ ಕೆಲಸ ನಿರ್ವಹಿಸಿ, ಎಲ್ಲ ಪದವಿಗಳಲ್ಲೂ ಜನಮನ್ನಣೆ ಪಡೆದರು. ಅವರು ತಮ್ಮ ನಿವೃತ್ತ ಜೀವನವನ್ನು ಆಯುರಾರೋಗ್ಯ ದಿಂದ ಕಳೆಯಲೆಂದು ಸಪ್ತಗಿರಿ ಹಾರ್ದಿಕ ವಾಗಿ ಸಪ್ತಗಿರೀಶ್ವರನಲ್ಲಿ ಬೇಡುತ್ತದೆ.

## ತಿ.ತಿ.ದೇ ಮುದ್ರಣಾಲಯದ ಮ್ಯಾನೇಜರ್ ಪದವಿ ವಿರಮಣ

ತಿ.ತಿ.ದೇ. ಮುದ್ರಣಾಲಯದ ಮ್ಯಾನೇಜರ್ ಪದವಿಯಲ್ಲಿ ಕೆಲಸ ಮಾಡುತ್ತಿದ್ದ ಶ್ರೀ ಪಿ. ಮೋಹನ್ ರಾವ್ 30-6-96 **ರಂದು ವಯೋಮಾನ** ರೀತ್ಯಾ ಪದವಿಯಿಂದ ನಿವೃತ್ತರಾದರು.

ತಿ.ತಿ.ದೇ ಮುದ್ರಣಾಲಯದಲ್ಲಿ ಅತಿ ಕಿರಿಯ ವಯಸ್ಸಿನಲ್ಲೇ ಉದ್ಯೋಗಕ್ಕೆ ಸೇರಿದ ಶ್ರೀಯು



ಕಾರ್ಯನಿರ್ವಹಣಾಧಿಕಾರಿಗಳೊಡನೆ ಶ್ರೀ ರಾಂಬಾಬು ಅವರು.
ಶ್ರೀ ನರ್ರಾನರಸಿಂಹಂ ಅವರಿಗೆ ಪ್ರಸಾದ ನೀಡುತ್ತ ಕಾರ್ಯನಿರ್ವಹಣಾಧಿಕಾರಿ.

## ತಿ.ತಿ.ದೇ. ನೂತನ ಅಧ್ಯಕ್ಷರ ಪ್ರಮಾಣವಚನ ಸ್ವೀಕಾರ

ತಿ. ತಿ. ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ಅಧ್ಯಕ್ಷಸ್ಥಾನಕ್ಕೆ ಆಂಧ್ರಪ್ರದೇಶದ ಪ್ರಿನ್ಸಿಪಾಲ್ ಸೆಕ್ರೆಟರಿ (ರೆವಿನ್ಯೂ) ಶ್ರೀ ರಾಂಬಾಬು ಅವರನ್ನು ಆಂಧ್ರಪ್ರದೇಶ ಸರ್ಕಾರ ನೇಮಕ ಮಾಡಿದ್ದು, ಅವರು ಮೇ ಮೂವತ್ತರಂದು ಸಕುಟುಂಬರಾಗಿ ತಿರುಮಲೆಗೆ ಆಗಮಿಸಿ, ತಿರುಮಲೆಯ ಸ್ವಾಮಿ ಆಲಯದ ಗರುಡಾಳ್ವಾರ್ ಸನ್ನಿಧಿಯಲ್ಲಿ ಅಧ್ಯಕ್ಷ ಪದವಿಯ ಪ್ರಮಾಣ ವಚನವನ್ನು ಸ್ವೀಕರಿಸಿದರು.

ಗುರುವಾರ ಬೆಳಗ್ಗೆ ನಡೆದ ಈ ಪ್ರಮಾಣಸ್ವೀಕಾರ ಕಾರ್ಯಕ್ರಮದಲ್ಲಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಅವರು ಪ್ರಮಾಣ ವಚನ ಸ್ವೀಕಾರ ಮಾಡಿಸಿದರು. ನಂತರ ಬೆಳಗ್ಗೆ ಹನ್ನೊಂದು ಗಂಟೆಗೆ ಆಂಧ್ರಪ್ರದೇಶದ ಮುಜರಾಯಿ ಇಲಾಖೆಯ ಕಮಿಷನರ್ ಶ್ರೀ ನರ್ರಾನರಸಿಂಹಂ ಅವರು ಧರ್ಮಕರ್ತರ ಮಂಡಳಿಯ ಪದನಿಮಿತ್ತ ಸದಸ್ಯರಾಗಿ ಪ್ರಮಾಣ ವಚನವನ್ನು ಸ್ವೀಕರಿಸಿದರು.

ಮೇ 30, 31 ರಂದು ಧರ್ಮಕರ್ತರ ಮಂಡಳಿಯ ಸಮಾವೇಶ ನಡೆದರೂ, ಇದು ಲಾಂಛನಪ್ರಾಯವಾಗಿ ನಡೆದ ಸಮಾವೇಶ ಮಾತ್ರವೆಂದೂ ಯಾವುದೇ ಮುಖ್ಯ ತೀರ್ಮಾನವನ್ನೂ ಕೈಗೆತ್ತಿಕೊಳ್ಳಲಿಲ್ಲವೆಂದೂ, ಎಲ್ಲ ವಿಷಯಗಳನ್ನೂ ಪರಿಶೀಲಿಸಿದ ನಂತರವೇ ತೀರ್ಮಾನಗಳನ್ನು ಮಾಡುವುದಾಗಿಯೂ ಅಧ್ಯಕ್ಷ ಶ್ರೀ ಜೆ. ರಾಮ್‌ಬಾಬು ಅವರು ತಿಳಿಸಿದರು. ಸಮಾವೇಶದಲ್ಲಿ ತಿರುಪತಿಯ ಎಂ. ಎಲ್. ಎ. ಶ್ರೀ ಮೋಹನ್, ಶ್ರೀ ರಾಜಯ್ಯ, ಶ್ರೀರಾಮಚಂದ್ರಾರೆಡ್ಡಿ, ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ ಕುಮಾರ್, ಮುಜರಾಯಿ ಇಲಾಖಾ ಕಮಿಷನರ್ ಶ್ರೀ ನರ್ರಾನರಸಿಂಹಂ ಭಾಗವಹಿಸಿದ್ದರು.

ತರು ಕ್ರಮಕ್ರಮವಾಗಿ ಮೇಲಿನ ಸ್ತರಕ್ಕೇರುತ್ತ 1994 ರ ಡಿಸೆಂಬರ್ ತಿಂಗಳಿನಲ್ಲಿ ಮ್ಯಾನೇಜರ್ ಹುದ್ದೆಗೆ ಬಢತಿ ಹೊಂದಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದರು. ಅವರ ನಿವೃತ್ತ ಜೀವನ ಸುಖಮಯವಾಗಲೆಂದು ಶ್ರೀ ವೆಂಕಟೇಶ್ವರಸ್ವಾಮಿಯಲ್ಲಿ ಸಪ್ತಗಿರಿ ಬೇಡುತ್ತದೆ.

## ತಿ.ತಿ.ದೇ. ನ್ಯಾಯವಿಭಾಗಕ್ಕೆ ನೂತನ ಅಧಿಕಾರಿ

ನ್ಯಾಯಮೂರ್ತಿ ಅನಂತಶಯನ ಪ್ರಸಾದ್ ಅವರು ತಿ.ತಿ.ದೇ., ನ್ಯಾಯಶಾಖೆಗೆ ನೂತನ ಅಧಿಕಾರಿಯಾಗಿ ಈಚೆಗೆ ಪದವಿಯನ್ನು ಸ್ವೀಕರಿಸಿದ್ದಾರೆ.

ಶ್ರೀಯುತರು ಈ ಮೊದಲು ರಂಗಾರೆಡ್ಡಿ ಜಿಲ್ಲೆಯಲ್ಲಿ ನ್ಯಾಯಮೂರ್ತಿಗಳಾಗಿ ಕೆಲಸ ಮಾಡಿದ್ದರು.

ತಿ. ತಿ. ದೇವಸ್ಥಾನಗಳ ಎಲ್ಲ ವಹಿವಾಟುಗಳಲ್ಲಿಯೂ ನ್ಯಾಯಾಲಯಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ನೋಡಿಕೊಳ್ಳುವ ಇಲಾಖೆಯೇ ತಿ.ತಿ.ದೇ. ನ್ಯಾಯವಿಭಾಗ. ಈ ವಿಭಾಗಕ್ಕೆ ಹೆಸರಾಂತ ನ್ಯಾಯ ಕೋವಿದರನ್ನು ನಿಯಮಿಸುವುದು ತಿ.ತಿ.ದೇ. ಗಳಲ್ಲಿ ಅನೂಚಾನವಾಗಿ ನಡೆದು ಬಂದಿರುವ ಪದ್ಧತಿ. ಇಲ್ಲಿ ತಿ.ತಿ.ದೇವಸ್ಥಾನಗಳ ಮತ್ತು ಹೊರಗಿನವರ ವಿವಾದಗಳು, ತಿ.ತಿ. ದೇವಸ್ಥಾನಗಳ ಒಳಗಿನ ವಿವಾದಗಳು - ಇವುಗಳನ್ನು ಪರಿಷ್ಕರಿಸಲು ಮಾರ್ಗಾನ್ವೇಷಣೆ ಮಾಡಲಾಗುತ್ತದೆ.





## ಸಂಸ್ಕೃತಿ ಪರಿಚಯ ಪ್ರಜೆಗಳಿಗೆ ಅತ್ಯಗತ್ಯ

-ಎನ್. ರಮೇಶಕುಮಾರ್

ಸಂಸ್ಕೃತಿಯ ಬಗ್ಗೆ ಪ್ರತಿಯೊಬ್ಬರೂ ತಿಳಿದು ನಡೆಯಬೇಕಾದು ಅಭಿವೃದ್ಧಿಗಾಗಿ ಅತ್ಯಗತ್ಯ. ಇದು ಚಿಕ್ಕ ವಯಸ್ಸಿನಿಂದಲೇ ತಿಳಿಯಬೇಕಾದ್ದರಿಂದ ವಿದ್ಯಾರ್ಥಿಗಳು ಪಾಠಶಾಲಾ ಹಂತದಲ್ಲಿಯೇ ಸಂಸ್ಕೃತಿಯನ್ನು ತಿಳಿಯಬೇಕಾಗಿದೆ ಎಂದು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶಕುಮಾರ್ ನುಡಿದರು.

ಶ್ರೀಯುತರು ತಿ.ತಿ.ದೇ. ಧರ್ಮಪ್ರಚಾರ ಪರಿಷತ್‌ನ ಪುರಾಣ ಪ್ರಬೋಧ ಪರೀಕ್ಷಾ ವಿಭಾಗದ 15 ನೇ ವರ್ಷದ ಸಂದರ್ಭದಲ್ಲಿ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಜೂನ್ ಐದರಂದು ನಡೆದ ರ‍್ಯಾಂಕ್ ವಿಜೇತರ ಸನ್ಮಾನ ಕಾರ್ಯಕ್ರಮದಲ್ಲಿ ಮಾತನಾಡುತ್ತಿದ್ದರು. ಆಂಧ್ರಪ್ರದೇಶದಲ್ಲಿ ಪೌಢಶಾಲಾ ವಿದ್ಯಾರ್ಥಿಗಳಿಗಾಗಿ ಧರ್ಮ ಪ್ರಚಾರ ಪರಿಷತ್ ನಡೆಸಿದ ಪುರಾಣಪ್ರಬೋಧ ಪರಿಚಯ - ಪರೀಕ್ಷಾನಂತರ ರ‍್ಯಾಂಕ್ ಸಾಧಿಸಿದವರಿಗೆ ಶ್ರೀಯುತರು ಬೆಳ್ಳಿಯ ಪದಕಗಳನ್ನು ನೀಡಿದರು. ರಾಜ್ಯಮಟ್ಟದಲ್ಲಿ ಪ್ರಥಮ ಸ್ಥಾನವನ್ನು ಪಡೆದ ಎನ್. ವಂಶಿಕೃಷ್ಣ (ಚಿತ್ತೂರುಜಿಲ್ಲೆಯ ಗಾರಂಪಲ್ಲಿ ಪಾಠಶಾಲೆ) ದ್ವಿತೀಯಸ್ಥಾನವನ್ನು ಎಸ್. ಎರ್ರಿಸಾಮಿ (ಅನಂತಪುರಂ ಜಿಲ್ಲೆ ಕೊಡಿಗೇನಹಳ್ಳಿ ಪಾಠಶಾಲೆ) ತೃತೀಯಸ್ಥಾನವನ್ನು ಎ. ವಿ. ಜಯಕುಮಾರ್ (ರಂಗಾರೆಡ್ಡಿ ಜಿಲ್ಲೆ ಗಚ್ಚಿ ಬೌಲಿ ಪಾಠಶಾಲೆ) ಅವರುಗಳಿಗೆ ಅನುಕ್ರಮವಾಗಿ 100 ಗ್ರಾಂ, 75 ಗ್ರಾಂ, 50 ಗ್ರಾಂಗಳ ಬೆಳ್ಳಿಯ ಪದಕಗಳನ್ನು ನೀಡಲಾಯಿತು. ಈ ಪರೀಕ್ಷೆಗಳಿಗೆ ಅತಿಹೆಚ್ಚು ವಿದ್ಯಾರ್ಥಿಗಳನ್ನು ಕಳುಹಿಸಿದ ಕಡಪ ಜಿಲ್ಲೆಯ ಪ್ರೊದ್ದುಟೂರು ವಿನ ಎಸ್. ಕೆ. ಸಿ. ವಿ. ಪಾಠಶಾಲೆಗೆ ಸ್ವಾಮಿಯ ಹಾಗೂ ಅಮ್ಮನವರ ಷೀಲ್ಡ್ ಅನ್ನು ಅವರು ನೀಡಿದರು. ನಂತರ ತಿ.ತಿ.ದೇ. ಜೆ.ಇ.ಓ. ಶ್ರೀ ಸತ್ಯನಾರಾಯಣರಾವ್ ಅವರು ರಾಜ್ಯದ 23 ಜಿಲ್ಲೆಗಳ ಮೊದಲು, ಎರಡು, ಮೂರನೇ ಸ್ಥಾನ ಪಡೆದವರಿಗೆ ಬಹುಮಾನಗಳನ್ನು ನೀಡಿದರು. ಕಾರ್ಯಕ್ರಮದಲ್ಲಿ ತಿ.ತಿ.ದೇ. ಆರ್ಥಿಕ ಸಲಹೆಗಾರ ಶ್ರೀ ಕೆ. ಕುಪ್ಪುಸ್ವಾಮಿ, ಧರ್ಮ ಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಮೊದಲಾದವರು ಬಾಗವಹಿಸಿದ್ದರು.

ದರ್ಶಿಸಿ ! ಆನಂದಿಸಿ !

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ತಿರುಮಲೆ

# ಬ್ರಹ್ಮೋತ್ಸವ ಕಾರ್ಯಕ್ರಮಗಳು



14-9-96 ರಿಂದ 23-9-96 ವರೆಗೆ





| ದಿನಾಂಕ | ವಾರ | ಹಗಲು ಉತ್ಸವಗಳು | ರಾತ್ರಿ ಉತ್ಸವಗಳು |
|---|---|---|---|
| 14-9-96 | ಶನಿ | -- | ಸೇನಾಧಿಪತಿ ಉತ್ಸವ, ಅಂಕುರಾರ್ಪಣೆ |
| 15-9-96 | ಭಾನು | ತಿರುಚ್ಚಿ ಉತ್ಸವ, ಧ್ವಜಾರೋಹಣ | ದೊಡ್ಡ ಶೇಷವಾಹನ |
| 16-9-96 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 17-9-96 | ಮಂಗಳ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 18-9-96 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 19-9-96 | ಗುರು | ಪಲ್ಲಕಿಯಲ್ಲಿ ಮೋಹಿನೀ ಅವತಾರೋತ್ಸವ | ಗರುಡೋತ್ಸವ |
| 20-9-96 | ಶುಕ್ರ | ಹನುಮದ್ವಾಹನ, ಸ್ವರ್ಣರಥ, ಸಂ\|\| ವಸಂತೋತ್ಸವ | ಗಜವಾಹನ |
| 21-9-96 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 22-9-96 | ಭಾನು | ರಥೋತ್ಸವ | ಅಶ್ವವಾಹನ |
| 23-9-96 | ಸೋಮ | ಪಲ್ಲಕ್ಕಿ ಉತ್ಸವ, ಚಕ್ರಸ್ನಾನ | ತಿರುಚ್ಚಿಯಲ್ಲಿ ಧ್ವಜಾವರೋಹಣೋತ್ಸವ |

ಈ ಹತ್ತುದಿನಗಳಲ್ಲಿ ತಿರುಮಲೆ ಆಸ್ಥಾನಮಂಟಪದಲ್ಲಿ ಪ್ರಮುಖ ಪಂಡಿತರಿಂದ ಧಾರ್ಮಿಕೋಪನ್ಯಾಸಗಳು, ಪುರಾಣಪ್ರವಚನಗಳು ನಡೆಯುತ್ತವೆ. ಸಂಗೀತ ಕಾರ್ಯಕ್ರಮಗಳು, ಹರಿಕಥೆ, ಭಜನ ಕಾರ್ಯಕ್ರಮಗಳೂ ಜರುಗುತ್ತವೆ.

ತಾವೂ ಬನ್ನಿ ತಮ್ಮವರನ್ನೂ ಕರೆತನ್ನಿ

ದರ್ಶಿಸಿ ! ಆನಂದಿಸಿ !

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ತಿರುಮಲೆ

# ನವರಾತ್ರಿ ಬ್ರಹ್ಮೋತ್ಸವ ಕಾರ್ಯಕ್ರಮಗಳು

## 13-10-96 ರಿಂದ 21-10-96 ವರೆಗೆ







| ದಿನಾಂಕ | ವಾರ | ಹಗಲು ಉತ್ಸವಗಳು | ರಾತ್ರಿ ಉತ್ಸವಗಳು |
|---|---|---|---|
| 13-10-96 | ಭಾನು | ತಿರುಚ್ಚಿ ಉತ್ಸವ | ದೊಡ್ಡಶೇಷವಾಹನ |
| 14-10-96 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 15-10-96 | ಮಂಗಳ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 16-10-96 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 17-10-96 | ಗುರು | ಮೋಹಿನೀ ಅವತಾರೋತ್ಸವ | ಗರುಡೋತ್ಸವ |
| 18-10-96 | ಶುಕ್ರ | ಹನುಮದ್ವಾಹನ ಸಂ\|\| ಸುವರ್ಣರಥೋತ್ಸವ, ವಸಂತೋತ್ಸವ | ಗಜವಾಹನ |
| 19-10-96 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 20-10-96 | ಭಾನು | ರಜತರಥೋತ್ಸವ | ಅಶ್ವವಾಹನ |
| 21-10-96 | ಸೋಮ | ಪಲ್ಲಕ್ಕಿ ಉತ್ಸವ , ಚಕ್ರಸ್ನಾನ | ತಿರುಚ್ಚಿವಾಹನ, |

ಈ ಹತ್ತು ದಿನಗಳಲ್ಲಿ ತಿರುಮಲೆ ಆಸ್ಥಾನಮಂಟಪದಲ್ಲಿ ಪ್ರಮುಖ ಪಂಡಿತರಿಂದ ಧಾರ್ಮಿಕೋಪನ್ಯಾಸಗಳು, ಪುರಾಣಪ್ರವಚನಗಳು ನಡೆಯುತ್ತವೆ. ಸಂಗೀತ ಕಾರ್ಯಕ್ರಮಗಳು, ಹರಿಕಥೆ, ಭಜನ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ

Edited and Published on behalf of T.T. Devasthanams by N.S. Rama Murthy, M.A., and Printed at T.T.D. Press by Manager, T.T.D. Press, Tirupati - 517 507.

